# ಮುನ್ನುಡಿ

ಈ ಸಂಗ್ರಹದಲ್ಲಿ ನನ್ನ ಐದು ಸ್ವತಂತ್ರ ಕಥೆಗಳೂ, ನಾಲ್ಕು ‌ಅನುವಾದಿತ ಕಥೆಗಳನ್ನೂ ಕೊಡಲಾಗಿದೆ.

ಇವುಗಳಲ್ಲಿ 'ಗಿಣಿ ಕಲಿಸಿದ ಪಾಠ' 'ಹೆಣ್ಣು ಹುಚ್ಚು' 'ಕನ್ಯಾಮಣಿ' ‌'ಕಣ್ಣುಮುಚ್ಚಾಲೆ' ಅಚ್ಚು ಕಾಣುತ್ತಿರುವುದು ಇದೇ ಮೊದಲು.

ಕ್ನುತ್ ಹಮ್ಸುನ್, ಟಾಲಸ್ಟಾಯ್, ಸೋಲೋಗುಬ್ ಮತ್ತು ಎಮಿಲ್ ಜ಼ೋಲಾ ಮೊದಲಾದ ಪಾಶ್ಚಾತ್ಯ ಕಲಾವಿದರ ತಂತ್ರ ಪರಿಚಯ ನಮ್ಮ ಜನಗಳಿಗಾಗಲೆಂದು ಅವರ ಒಂದೊಂದು ಕಥೆಗಳನ್ನು ಕೊಡಲಾಗಿದೆ.

ನನ್ನ ಇತರ ಸಂಗ್ರಹಗಳು ನಮ್ಮ ಜನರ ಪ್ರೇಮ ಗೌರವಗಳಿಗೆ ಪಾತ್ರವಾದಂತೆ ಇದೂ ಪಾತ್ರವಾಗುವುದೆಂದು ನಂಬುತ್ತೇನೆ.

"ಅನ್ನಪೂರ್ಣ"
ವಿಶ್ವೇಶ್ವರಪುರಂ,
ಬೆಂಗಳೂರು ನಗರ

ಅ. ನ. ಕೃಷ್ಣರಾಯ.

## ಪರಿವಿಡಿ





# ಗಿಣಿ ಕಲಿಸಿದ ಪಾಠ

ಸೋಮುವಿಗೆ ಪರಮಾಶ್ಚರ್ಯವಾಯಿತು. ಮಾತಾಳಿಯಾದ ಅವನು ಮಂತ್ರಮುಗ್ಧನಂತೆ ಕುಳಿತುಬಿಟ್ಟ. ನನ್ನ ನಡತೆ ಅವನಿಗೆ ವಿಚಿತ್ರವೆನಿಸಿರಬೇಕು.

ನಾನೂ ಸೋಮುವೂ ಹರಟೆ ಹೊಡೆಯುತ್ತ ಕುಳಿತಿದ್ದಾಗ ಒಂದು ಬೆಕ್ಕು ಬಂತು. ಅದರ ಮೈ ಮೇಲೆ ಸೊಗಸಾದ ಬಿಳಿಯ ಫರ್. ಅಲ್ಲಿ ಇಲ್ಲಿ ಸ್ವಲ್ಪ ಬೂದು. ಹುರಿಕಟ್ಟಾದ ಮೀಸೆ. ನಡೆಯಲ್ಲಿ ಸಿಂಹದ ಗಾಂಭೀರ್ಯ. ಯಾರಿಗಾದರೂ ಅದನ್ನು ಕಂಡರೆ ಮೋಹ ಹುಟ್ಟುತ್ತಿತ್ತು. ಸೋಮುಗಂತೂ 'ಪಿಲ್ಲಿ'ಯನ್ನು ಕಂಡರೆ ಪಂಚಪ್ರಾಣ. ನನ್ನನ್ನು ಹುಡುಕಿಕೊಂಡು ಅವನು ನಮ್ಮ ಮನೆಗೆ ಬರುತ್ತಿದ್ದರೂ, ಪಿಲ್ಲಿಗಾಗಿಯೇ ಎಂಬುದು ಎದ್ದು ಕಾಣುತಿತ್ತು.

ಪಿಲ್ಲಿಯನ್ನು ನಾನು ಸಾಕಿರಲಿಲ್ಲ. ಊಟಕ್ಕೆ ಕುಳಿತಾಗ 'ಮಿಯಾಂವ್' ಎಂದರೆ ತಿನ್ನುವ ಅನ್ನದ ಒಂದು ತುತ್ತು ಅದಕ್ಕೆ ಇಡುತ್ತಿದ್ದೆ. ಅದೇ ಪಿಲ್ಲಿಗೆ ರೂಢಿಯಾಗುತ್ತ ಬಂತು. ಊಟದ ಹೊತ್ತಿಗೆ ಎಲ್ಲಿದ್ದರೂ ಸರಿಯಾಗಿ ಮನೆಯ ಅಳಿಯನಂತೆ ಇಳಿಯುತ್ತಿತ್ತು. ಬಡಜೀವ-ಹೋಗಲಿ ಎಂದು ನಾನು ಅನ್ನ ಹಾಕುತ್ತಲೂ ಇದ್ದೆ. ಯಾವ ಜೀವಿಗೂ ಬರಿ ಅನ್ನದಿಂದಲೇ ಹೊಟ್ಟೆ ತುಂಬುವುದಿಲ್ಲ. ಪಿಲ್ಲಿಗೂ ಹಾಗೆಯೇ! ಅದಕ್ಕೆ ಮಧ್ಯೆ ಮಧ್ಯೆ ಮೈದಡವಿ ಒಂದು ಪ್ರೀತಿಯ ಮಾತಾಡಿದರೆ ಆಪ್ಯಾಯಮಾನ. ಮೆಲ್ಲಮೆಲ್ಲಗೆ ನನ್ನ ಜತೆ ಸಲಿಗೆ ಬೆಳಸಿಕೊಂಡಿತು. ನಾನಿದ್ದಲ್ಲಿಗೆ ಬಂದು ಸ್ನೇಹವನ್ನು ಬಯಸುತ್ತಿತ್ತು.

ಸೋಮು ಇದನ್ನು ಚೆನ್ನಾಗಿ ಬಲ್ಲ.

ನನಗೆ ಮೂಕಜೀವಿಗಳೆಂದರೆ ಇದ್ದ ಪ್ರೇಮವೂ ಅವನಿಗೆ ಗೊತ್ತಿತ್ತು.

ಒಂದು ಸಲ ಅಜೀಜನ ಮೆಹನತ್ತಿನಿಂದ ಸೊಗಸಾದ ಅಲ್‌ಸಾಟಿಯನ್ ನಾಯಿಮರಿ ದೊರೆಯಿತು. ಅದನ್ನು ಮಗುವಿನಂತೆ ಸಾಕಿದೆ. ಮರಿ ಬೆಳೆದು ದೊಡ್ಡ ನಾಯಿಯಾಯಿತು. ಮನೆಗೆ ದೊಡ್ಡ ಸೇವೆಯಾಯಿತು. ಅದರ

ವನ್ನ ದುರದೃಷ್ಟ! ಯಾರೊ ಅದಕ್ಕೆ ವಿಷವಿಟ್ಟು ಕೊಂದರು. ಪ್ರೀತಿಯ ಬಂಧುವನ್ನು ಕಳೆದುಕೊಂಡಷ್ಟು ದುಃಖವಾಯಿತು. ಇನ್ನು ಮೇಲೆ ಯಾವ ಪ್ರಾಣಿಯನ್ನೂ ಸಾಕುವುದಿಲ್ಲ ಎಂದು ನಿರ್ಧರಿಸಿದೆ. ಇಲ್ಲದ ವ್ಯಾಮೋಹ ವನ್ನು ಹಚ್ಚಿಕೊಂಡು ಅನಂತರ ಸುಮ್ಮನೆ ಕೊರಗುವುದೇಕೆ ಎಂದು ವಿಚಾರ ಮಾಡಿದೆ.

ಆದರೆ ಪ್ರಾಣಿಗಳ ಓಡಾಟವಿಲ್ಲದೆ ಮನೆ ಭಣಭಣ ಎನ್ನುತ್ತಿತ್ತು. ಒಂದು ಜತೆ ಪಾರಿವಾಳ ತಂದು ಸಾಕಿದೆ. ರೆಕ್ಕೆ ಪುಕ್ಕ ಕೆದರಿಕೊಂಡು 'ಗುಟುರು' ಹಾಕುತ್ತಾ ಅವು ಮನೆ ತುಂಬ ರಾಜರಾಣಿಯರಂತೆ ಮೆರೆಯು ತ್ತಿದ್ದವು. ನನ್ನ ಬಾಯಿಂದ ಆಹಾರವನ್ನು ತೆಗೆದುಕೊಳ್ಳುತ್ತಿದ್ದವು. ಒಂದು ದಿನ ಹೊರಗೆ ಹೋದ ಪಾರಿವಾಳಗಳು ಮರಳಿ ಬರಲೇ ಇಲ್ಲ. ಊರೆಲ್ಲಾ ಹುಡುಕಾಡಿದೆ. ಯಾವ ಹದ್ದಿನ ಬಾಯಿಗೆ ಬಿದ್ದವೋ ಎಂದು ಮರುಗಿದೆ.

ಪ್ರಾಣಿಗಳನ್ನು ಸಾಕಬಾರದೆಂಬ ನನ್ನ ನಿರ್ಧಾರ ಬಲಿಯಿತು. ಈ ಮಧ್ಯೆ 'ಪಿಲ್ಲಿ' ಬಂತು. ತಾನಾಗಿ ಬಂದುದನ್ನು, ಪ್ರೇಮ ಸ್ನೇಹ ಬಯಸುವ ಮೂಕಜೀವವನ್ನು ಹೊಡೆದಟ್ಟುವುದಕ್ಕಾಗುತ್ತದೆಯೇ ?

ಅದೇಕೋ ಬೆಕ್ಕುಗಳೆಂದರೆ ನನಗೆ ವಿಶ್ವಾಸ ಕಡಿಮೆ. ನಾನು ಶಾಲೆ ಯಲ್ಲಿ ಓದುತ್ತಿದ್ದಾಗ ಒಬ್ಬ ಶಿಕ್ಷಕರು ಬೆಕ್ಕಿನ ಹಾಗಿದ್ದರು. ಅವರ ಕಣ್ಣು ಬೆಕ್ಕಿನ ಕಣ್ಣು. ಮಾತೂ ಬೆಕ್ಕು ಮಿಯುಗುಟ್ಟಿದಂತೆ. ಇದಕ್ಕೆ ಇರಬಹುದು ಬೆಕ್ಕುಗಳೆಂದರೆ ನನಗೆ ಅಸಹ್ಯ.

ಇಂದು ಸೋಮು ನನ್ನ ಮೇಲೆ ಬೇಸರಪಟ್ಟುಕೊಳ್ಳುವುದಕ್ಕೆ ಕಾರಣ ವಿತ್ತು. ರೂಢಿಯಂತೆ ಪಿಲ್ಲಿ ಬಳಿಗೆ ಬಂತು. ಕೈಯಲ್ಲಿದ್ದ ಕಾಫಿ ಬಸಿಗೆ ಬಾಯಿ ಹಾಕಿತು. ನನಗೆ ಕೋಪ ನೆತ್ತಿಗೇರಿ ಅದನ್ನು ಬಡಿದು ಆಚೆಗಟ್ಟಿದೆ. ನಡೆದುದನ್ನು ಕಂಡು ಸೋಮು ಬೇಸರಗೊಂಡ.

'ಪಿಲ್ಲಿ ಬೇಡವಾದರೆ ಅದನ್ನು ಮನೆಬಿಟ್ಟು ಆಚೆಗೆ ಕಳುಹಿಸು. ಅನ್ನ ಹಾಕಿ ಸಾಕಿ ಹೀಗೆ ವಿನಾಕಾರಣ ಬಡಿಯುವುದರಲ್ಲಿ ಅರ್ಥವಿಲ್ಲ,' ಎಂದ.

'ಅದನ್ನು ಇಲ್ಲಿ ಬಾರೆಂದು ಆಮಂತ್ರಣ ಕೊಟ್ಟವರು ಯಾರು ?'

'ಸ್ನೇಹ ಪ್ರೇಮ ಸಿಕ್ಕುವೆಡೆ ಕರಸಿಕೊಳ್ಳದೆ ಹೋಗುವುದು ಪ್ರಾಣಿ ಸ್ವಭಾವ.'

ಇರಬಹುದು—ಆದರೆ ಬೆಕ್ಕಿನ ಸ್ವಭಾವ ನನ್ನ ಮನಸ್ಸಿಗೆ ಸೇರುವುದಿಲ್ಲ.'

'ಏಕೆ ?'

'ಈಚೆಗೆ ಬೆಕ್ಕಿನ ಜಾತಿಯ ಮೇಲೇ ಅಸಾಧ್ಯ ದ್ವೇಷ ಹುಟ್ಟಿಬಿಟ್ಟಿದೆ. ಕಾರಣ............'

'ಹೇಳು—ಸಂಕೋಚಪಡುವೆಯೇಕೆ ?'

'ನೀನು ನಮ್ಮ ಮನೆಗೆ ಬಂದು ಎಷ್ಟು ದಿವಸವಾಯಿತು ?'

'ಎಂಟು ಹತ್ತು ದಿವಸಗಳಾಗಿರಬಹುದು.'

'ಈ ಮಧ್ಯೆ ಏನಾಯಿತು ಬಲ್ಲೆಯಾ ?'

'ಹೇಗೆ ಗೊತ್ತಾಗಬೇಕು. ನೀನೂ ಸಿಕ್ಕಲಿಲ್ಲ.'

'ನನ್ನ ಮನಸ್ಸು ಬಹಳ ಕಳವಳಗೊಂಡಿತ್ತು. ಆದಕ್ಕೆ ಯಾರನ್ನೂ ನೋಡಬಯಸಲಿಲ್ಲ.'

'ಏನಾಯಿತು ಹೇಳು ಮಾರಾಯ.'

'ಈ ಎಂಟು ದಿವಸಗಳಲ್ಲಿ ಬಹಳ ನಡೆದುಹೋಗಿದೆ ಸೋಮು. ಕಳೆದ ವಾರ ನಾನು ಹಳ್ಳಿಗೆ ಹೋದೆ. ಅಲ್ಲಿ ಹಿಂಡು ಹಿಂಡು ಗಿಳಿಗಳು ಬಂದು ಶಾನುಭೋಗರ ಮನೆಯ ಮೇಲೆ ಕೂಡುತ್ತಿದ್ದುದನ್ನು ಕಂಡೆ. ಕೆಲ ವನ್ನು ಸಾಕಬೇಕೆಂದು ಆಸೆಯಾಯಿತು. ಶಾನುಭೋಗರಿಗೆ ಹೇಳಲು ಅವರು ಮೂರು ಗಿಣಿಗಳನ್ನು ಹಿಡಿಸಿ ಕೊಟ್ಟರು. ಊರಿಗೆ ಬಹಳ ಜೋಪಾನವಾಗಿ ತಂದೆ. ತಗಡಿನ ಸಾಮಾನು ಮಾಡುವವನ ಜತೆ ರಾತ್ರಿಯೆಲ್ಲಾ ಕುಳಿತು ಒಂದು ಸೊಗಸಾದ ಪಂಜರ ಮಾಡಿಸಿದೆ. ಮೂರು ಗಿಳಿಗಳೂ ಅದರಲ್ಲಿ ಸುಖವಾಗಿರುವಂತೆ ದೊಡ್ಡದಾಗಿಯೇ ಮಾಡಿಸಿದೆ, ಒಳ್ಳೆ ಹಸಿರು ಬಣ್ಣವನ್ನು ಹಾಕಿಸಿದೆ. ಗಿಣಿಗಳಿಗೆ ಹಣ್ಣು, ಹಾಲು, ಕಡಲೆಕಾಯಿ ಬೀಜ ಧಾರಾಳವಾಗಿ ಸರಬರಾಯಿ ಆಗುತ್ತಿತ್ತು. ಮೆಣಸಿನಹಣ್ಣನ್ನು ತಂದು ಪಂಜರದಲ್ಲಿ ತುಂಬಿದೆ.'

'ಗಿಣಿಗಳಿಗೆ ಸಂತೋಷವಾಗಿರಬಹುದು.'

'ಅವು ಒಂದೇ ಸಮನಾಗಿ ಅರಚಿಕೊಳ್ಳುತ್ತಲೇ ಇದ್ದವು. ಒಂದೇ ದಿನ ಬದುಕಿದ್ದು ಒಂದು ಗಿಳಿ ಸತ್ತುಹೋಯಿತು.'

'ಉಳಿದವು............'

'ಯಾವಾಗಲೂ ಪಂಜರವನ್ನು ಹರಿಯುವ ಯತ್ನ ಮಾಡುತ್ತಿದ್ದವು.

ಕಂಬಿಗಳನ್ನು ಕಿತ್ತು ಕಿತ್ತು ತಲೆದೂರಿಸುವಷ್ಟು ಸ್ಥಳ ಮಾಡಿದವು. ಎರಡು ದಿವಸಗಳು ಕಳೆದವು. ಬೆಳಿಗ್ಗೆ ಎದ್ದು ನೋಡುತ್ತೇನೆ. ಒಂದು ಗಿಳಿಯ ತಲೆ ಹರಿದು ಹೋಗಿತ್ತು. ಪಂಜರ ರಕ್ತಮಯ. ಅದು ಬಿಡುಗಡೆಗೆ ಯತ್ನಿಸುತ್ತಿದ್ದುದನ್ನು ಕಂಡುಕೊಂಡಿದ್ದ ಬೆಕ್ಕು ಅದನ್ನು ಹರಿದು ಹಾಕಿತ್ತು.'

'ಮೂರನೆಯದು.'

'ಅದರ ಪಾಡು ನೋಡಲಾರದೆ ನಾನೇ ಅದನ್ನು ಬಿಡುಗಡೆ ಮಾಡಿ ಬಿಟ್ಟೆ. ಪಂಜರವನ್ನು ನುಚ್ಚುನೂರು ಮಾಡಿ ಒಗೆದೆ.'

'ಒಳ್ಳೆಯ ಕೆಲಸ ಮಾಡಿದೆ. ಗಿಣಿಯನ್ನು ಕೊಂದಿತೆಂದು ಪಿಲ್ಲಿಯ ಮೇಲೆ ಆಗ್ರಹ—ಪಿಲ್ಲಿ ಒಳಗದ ಮೇಲೆ ಆಗ್ರಹವಲ್ಲವೇ ?'

'ಹೌದು—ಅಷ್ಟು ಆಸೆಯಿಂದ ತಂದಿದ್ದೆ. ಬಹಳ ಪ್ರೀತಿಯಿಂದ ಸಾಕಬೇಕೆಂದಿದ್ದೆ.'

'ತಪ್ಪು ನಿನ್ನದು ಗೆಳೆಯ. ಕಾಡುಹಕ್ಕಿಗಳನ್ನು ಸೆರೆಹಾಕಬಾರದು. ಸೆರೆ ಯಾರಿಗೂ ಪ್ರಿಯವಲ್ಲ. ಪ್ರಾಣವನ್ನಾದರೂ ಈಡುಮಾಡಿ ನಿನ್ನ ಎರಡನೆಯ ಗಿಣಿಯಂತೆ ಸೆರೆಯಿಂದ ತಪ್ಪಿಸಿಕೊಳ್ಳುವುದು ಲೇಸು. ಕಾಡಿನಲ್ಲಿ ಸುಖವಾಗಿದ್ದ ಗಿಣಿಯನ್ನು ತಂದು ಪಿಲ್ಲಿಯ ಬಾಯಿಗಿತ್ತು ಅದನ್ನು ನೀನು ದ್ವೇಷಿಸುವುದು ಯಾವ ನ್ಯಾಯ.'

ಅವನ ಮಾತು ಸತ್ಯ ತಿಳಿಸಿತು. ಪಿಲ್ಲಿಯ ದ್ವೇಷವನ್ನು ಬಿಟ್ಟೆ. ಪ್ರಾಣಕ್ಕಿಂತಲೂ ಸ್ವಾತಂತ್ರ್ಯ ಮೂಕಜೀವಿಗಳಿಗೇ ಅಷ್ಟು ಪ್ರಿಯವಾದರೆ ನಮಗೆಷ್ಟಾಗಬೇಡ ?

# ಜಾತಿಹೀನನ ಮನೆಯ ಜ್ಯೋತಿ

ತಮ್ಮ ಸೌಧದ ಮುಂದಿದ್ದ ಕೈದೋಟದ ಶಿಲಾಪೀಠದ ಮೇಲೆ ಕುಳಿತು ನೀಲಮ್ಮ ವಿಚಾರಮಗ್ನಳಾಗಿದ್ದಳು. ಅವಳ ಕಣ್ಣುಗಳು ಎದುರಿಗಿದ್ದ ಸೂರ್ಯಕಾಂತಿ ಪುಷ್ಪವನ್ನು ಎವೆಯಿಕ್ಕದೆ ನೋಡುತ್ತಿದ್ದರೂ ಮನಸ್ಸು ಬೇರೆ ಕಡೆ ಚಲಿಸುತ್ತಿತ್ತು. ತಾನು ನೋಡುತಿದ್ದ ತಾಳೆಯೋಲೆ ಪುಸ್ತಕದ ಹಾಳೆಗಳು ನೆಲದ ಮೇಲೆ ಹರಿದಾಡುತ್ತಿದ್ದುದು ಅವಳಿಗೆ ಗಮನವೇ ಇಲ್ಲ. ಕೈಯಲ್ಲಿ ಕಬ್ಬಿಣದ ಲೇಖನಿಯನ್ನು ಹಿಡಿದಿದ್ದಂತೆ ತಲೆಗೆ ಅದನ್ನು ಊರೆಗೊಟ್ಟು ಮೈಮರೆತಿದ್ದಳು.

ತಾಯಿ ಮಹಾದೇವಿ ಬಂದು ಎಚ್ಚರಿಸಿದಾಗಲೇ ಅವಳು ಕುಳಿತಿದ್ದ ಭಂಗಿಯನ್ನು ಬದಲಾಯಿಸಿದುದು. ತಾಯಿಯೊಂದಿಗೆ ತಾನು ಶಿವಾಲಯಕ್ಕೆ ಹೋಗಬೇಕಾಗಿದ್ದುದನ್ನು ಜ್ಞಾಪಿಸಿಕೊಂಡು ತಾಳೆಯೋಲೆಗಳನ್ನು ಸಂಗ್ರಹಿಸಿಕೊಂಡು ಎದ್ದು ನಿಂತಳು

"ಕ್ಷಮಿಸಿ–ಅಮ್ಮಾಜಿ. ಏನನ್ನೋ ಚಿಂತಿಸುತ್ತ ಶಿವಾಲಯಕ್ಕೆ ಹೋಗಬೇಕಾಗಿದ್ದುದನ್ನು ಸಂಪೂರ್ಣವಾಗಿ ಮರೆತೆ."

"ಏನು ಅಷ್ಟೊಂದು ಚಿಂತೆ ನೀಲಾ, ಇತ್ತೀಚಿಗೆ ಕನಸಿನ ಗೆಳೆತನದಲ್ಲಿ ಲೋಕದ ವ್ಯಾಪಾರವನ್ನೇ ಮರೆಯುತ್ತಿರುವೆ. ನಿನ್ನೆ ನೀನು ಬಸವರಾಜ ದೇವರೊಂದಿಗೆ ಹೊರಗೆ ಹೋಗಿದ್ದಾಗ ಮಾಲತಿ ಬಂದು ನಿನ್ನನ್ನು ದೂರಿ ಹೋದಳು. ನಿನ್ನ ಅನಾದರಕ್ಕೆ ಮುನಿದು ಪದ್ಮಪ್ರಭೆಯಂತೂ ನಮ್ಮ ಮನೆಗೆ ಬರುವುದನ್ನೇ ಬಿಟ್ಟುಬಿಟ್ಟಳು. ಹೀಗಾದರೆ ಹೇಗಮ್ಮಾ. ಗೆಳತಿಯರನ್ನು ದೂರಮಾಡಿಕೊಂಡು ಆಟಪಾಟಗಳನ್ನು ನಿರ್ಲಕ್ಷಿಸುವಷ್ಟು ನಿನ್ನ ಮನಸ್ಸನ್ನು ಸೆರೆಹಿಡಿದಿರುವ ವಿಚಾರ ಯಾವದು ?"

"ಯಾವದೂ ಇಲ್ಲ. ಅಮ್ಮಾಜಿ, ಇಷ್ಟೇಕೆ ಯೋಚಿಸುವಿರಿ. ಬನ್ನಿ ದೇವರ ದರ್ಶನ ಮಾಡಿ ಬರುವ. ಹಿಂದಿನಿಂದ ನನ್ನ ಚಿಂತೆಯ ಕಥೆಯನ್ನು ಹೇಳುತ್ತೇನೆ."

ನೀಲಾ ತಾಯಿಯೊಂದಿಗೆ ಹೊರಟಳು. ಮಂತ್ರಿಯ ಹೆಂಡತಿ ಮಗಳ ಗೊಪ್ಪುವಂತೆ ಪರಿವಾರ ಹಿಂದೆ ಹೊರಟಿತು. ದಾಸಿಯರು ಹೂವು, ಹಣ್ಣು, ಮಂಗಳದ್ರವ್ಯಗಳ ತಟ್ಟೆಗಳನ್ನು ಹಿಡಿದು ಜತೆಯಲ್ಲಿ ಹೊರಟರು. ಅತ್ತಿತ್ತ ಕಾಪಿನ ಭಟರು ದಾರಿ ಮಾಡಿಕೊಡುತ್ತಾ ಬೆಳ್ಳಿಯ ಕೋಲುಗಳನ್ನು ಹಿಡಿದು ನಡೆದರು.

ಕಲ್ಯಾಣ ನಗರದ ತ್ರಿಪುರಾಂತಕನ ದೇವಾಲಯ ಪುರಾಣಪ್ರಸಿದ್ಧವಾದುದಾಗಿತ್ತು. ಚಾಳುಕ್ಯರಾಯರ ಕಾಲದಲ್ಲಿ ಮಹಾ ವೈಭವನಗರವಾಗಿದ್ದ ಕಲ್ಯಾಣದಲ್ಲಿ ತ್ರಿಪುರಾಂತಕ ದೇವಾಲಯ ಆ ರಾಯರ ವೈಭವದ ಹೆಗ್ಗುರುತಾಗಿತ್ತು. ಚಾಳುಕ್ಯರ ಸೋಮೇಶ್ವರನನ್ನು ಕೊಂದು ಕಾಲಚೂರ್‍ಯರ ಬಿಜ್ಜಳನು ಭೂಮಿಪನಾದ ಮೇಲೆ ದೇವಾಲಯ ಮೂಲೆಗೆ ಬಿದ್ದಿತು. ಬಿಜ್ಜಳ ತನ್ನ ಅಂಧ ಧರ್ಮಾಭಿಮಾನದಿಂದ ಈಶ್ವರನ ದೇವಾಲಯದ ಕಡೆಗೆ ಹೆಚ್ಚು ಲಕ್ಷ್ಯ ಕೊಟ್ಟಿರಲಿಲ್ಲ. ಚಾಳುಕ್ಯ ಶಿಲಾ ಶಿಲ್ಪದ ವೈಭವ ಮುರಿದು ಬೀಳುತ್ತಿತ್ತು. ದೇವಾಲಯದ ಕಂಬಗಳು ನಿಂತಲ್ಲಿಂದಲೇ ನೆಲಕ್ಕುರುಳಿ ತಮ್ಮನ್ನು ಆಶ್ರಯಿಸಿದ್ದ ಮೇಲುಚಾವಣಿಗಳನ್ನು ಮುರಿದು ಕೆಡಹುತ್ತಿದ್ದವು. ಸುಂದರವಾಗಿದ್ದ ಅನೇಕ ಶಿಲ್ಪಮೂರ್ತಿಗಳು ಭಿನ್ನವಾಗಿ ದೇವಾಲಯದ ಪ್ರಾಂಗಣದಲ್ಲಿ ನರಳುತ್ತಾ ಬಿದ್ದಿದ್ದವು. ಅನೇಕ ಮೂರ್ತಿಗಳು ದೊಡ್ಡ ದೊಡ್ಡ ಅಧಿಕಾರಿಗಳ ಮನೆಗಳನ್ನಲಂಕರಿಸಿದ್ದವು.

ಬಿಜ್ಜಳನ ಆಸ್ಥಾನದಲ್ಲಿ ಬಸವರಾಜನ ಪ್ರಭೆ ಬೆಳಗಲು ಅವನಿಗೆ ಪ್ರಧಾನಿ ಪದವಿ ದೊರೆಯಿತು. ಲೋಕಸೇವೆಗೆ ಕಂಕಣಬದ್ಧನಾಗಿ ನಿಂತಿದ್ದ ಬಸವರಾಜ ತ್ರಿಪುರಾಂತಕನನ್ನು ಮರೆಯಲಿಲ್ಲ. ಉತ್ತಮ ಶಿಲ್ಪಿಗಳನ್ನು ಬರಮಾಡಿಕೊಂಡು ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಅದಕ್ಕೆ ಉದಾರ ಮನಸ್ಸಿನಿಂದ ದತ್ತಿಗಳನ್ನೂ, ಗದ್ದೆ ಹೊಲಗಳನ್ನೂ ದಾನವಾಗಿ ಬರೆದು ದೇವಾಲಯದ ಪೂಜಾ ಕೆಲಸ ಅಡ್ಡಿ ಆತಂಕವಿಲ್ಲದೆ ವೈಭವದಿಂದ ನಡೆದುಕೊಂಡು ಹೋಗುವಂತೆ ವ್ಯವಸ್ಥೆ ಮಾಡಿದ. ಕಲ್ಯಾಣದ ಶೈವ ಜನತೆಗೆ ಪುನರ್ಜನ್ಮ ಬಂದ ಹಾಗಾಯಿತು. ಬಸವರಾಜನ ದೈವಭಕ್ತಿಯನ್ನು ಜನ ಮುಕ್ತಕಂಠದಿಂದ ಹೊಗಳಿತು.

ತಂದೆ ನೀನೆನ್ನ ಕತ್ತಲೆಯ ಕೆಡಹಿ ಬೆಳಕ ಕರುಣಿಸು ತಂದೆ" ಎಂದು ಬಸವದೇವರ ಬಳಿಗೆ ಬಂದು ಆರ್ತನಾಗಿ ಅವರ ಪಾದಗಳ ಮೇಲೆ ಬಿದ್ದ. ಬಸವದೇವರು ತರುಣನನ್ನು ಸಂತೈಸಿ—

"ನಿನ್ನ ಏನೆಂದು ಕರೆಯುವರು ಕಂದಾ."

"ಶೀಲವಂತನೆಂದು ತಂದೆ."

"ಶೀಲವಂತಯ್ಯಾ ಏಳುಏಳು. ಗುರುಕರುಣ ನಿನ್ನದಾಗುವುದು. ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ. ದೇವನ ಪೂಜಿಸಿ ಚನ್ನನ ಕುಲ ಚನ್ನಾಯಿತು. ದೇವನ ಪೂಜಿಸಿ ದಾಸನ ಕುಲ ದೇಸೆ ವಡೆಯಿತ್ತು. ದೇವನ ಅಡಿಯಕ್ಕೆರಗಿ ಮಡಿವಾಳ ಮಾಚಯ್ಯ ನಿಮ್ಮಡಿಯಾದ. ಅವನೊಲಿದ ಕುಲಕ್ಕೆ ಆವನೊಲಿದ ಹೊಲೆಗೆ ಮೇರೆಯುಂಟೆ ಅಯ್ಯ ? ಜಾತಿ ವಿಜಾತಿಯಾದರೇನು ? ಅಜಾತಂಗೆ ಶರಣೆನ್ನದಾತನೇ ಹೊಲೆಯ ಕಾಣಾ. ಕರ್ಮಜಾತನ ಕಳೆದ ಶ್ರೀಗುರುಲಿಂಗವು ಪುಣ್ಯಜಾತನ ಮಾಡಿದ ಬಳಿಕ ಶಿವ ಕುಲವಲ್ಲದೆ ಅನ್ಯಥಾ ಕುಲವುಂಟೇ ಶರಣರಿಗೆ. ಆವ ಕುಲವಾದಡೇನು ? ಲಿಂಗವಿದ್ದಾತನೇ ಕುಲಜನು."

ಎಂದು ನುಡಿಯಲು ಶಿವಭಕ್ತಗಡಣವೆಲ್ಲಾ ಉಘೇ ಉಘೇ ಎಂದು ಉಘ್ಘಡಿಸಿತು. ಶರಣವೃಂದವೆಲ್ಲಾ ಪ್ರಭುದೇವರ ಕಡೆ ನೋಡಿ ಅವರ ನಿರ್ಣಯವನ್ನು ನಿರೀಕ್ಷಿಸಿತು. ಪ್ರಭುಗಳು ಕ್ಷಣಕಾಲ ಕಣ್ಮುಚ್ಚಿ ಅಂತರ್ಮುಖರಾದರು. ಸಾವಕಾಶವಾಗಿ ನುಡಿದರು.

"ನಾನು ಘನ ತಾನು ಘನವೆಂಬ ಹಿರಿಯರುಂಟೇ ? ಜಗದೊಳಗೆ ಹಿರಿಯರ ಹಿರಿತನದಿಂದೇನಾಯಿತು ? ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೆ ಶರಣ."

ಎಂದು ತಮ್ಮ ಸಂದೇಶವನ್ನು ಸಾರಿ ಸಭೆಯನ್ನು ಮುಕ್ತಾಯಗೊಳಿಸಿದರು. ಬಸವದೇವರು ಶೀಲವಂತನ ತಲೆಯನ್ನು ನೇವರಿಸುತ್ತಾ "ನಿನ್ನ ಪೆತ್ತ ಪುಣ್ಯ ಗರ್ಭವಾವುದು ಕಂದಾ."

"ನಾನು ಅಂತ್ಯಜ ಕುಲದವನು ತಂದೆ. ಎನ್ನ ಪಿತ ಮಚ್ಚಿಗಾರ. ಶಿವಶರಣರ ಪಾದಧೂಳಿ ಹರಳಯ್ಯನೆಂಬರಾತನನ್ನು. ನಿಮ್ಮ ನಡೆ ನುಡಿಯೇ ಎಮ್ಮ ವೇದಮಂತ್ರ. ಭಕ್ತಿಕಂಪಿತನಾಗಿ ಎನ್ನ ಪಿತನೊಮ್ಮೊಮ್ಮೆ 'ಭಕ್ತಿ

ಭಂಡಾರಿ, ಶಿವನಂದಿಯ ಅವತಾರಿ ಬಸವದೇವರು ಎಮ್ಮ ಹೊಸಲು ಮೆಟ್ಟುವ ರೇನೋ ಶೀಲಾ—ಎಮ್ಮ ಹೀನ ಶಿರಕ್ಕೆ ತಮ್ಮ ಪಾದಧೂಳಿಯ ಮುಡಿಯ ಲೀಯುವರೇನೋ ಶೀಲಾ' ಎಂದು ಅಂಗಲಾಚುವನು ತಂದೆ. ಎಮ್ಮ ಬಡ ಗುಡಿಸಿಲಿಗೆ ಒಮ್ಮೆ ಬರುವೆಯಾ ದೇವಾ." ಎಂದು ಬೇಡಿದ. ಬಸವ ರಾಜನ ಕಣ್ಣುಗಳಲ್ಲಿ ನೀರು ತುಂಬಿತು. ಶೀಲನನ್ನಪ್ಪಿ—

"ಎನಗಿಂತ ಕಿರಿಯರಾರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ. ಎನ್ನಲ್ಲಿ ದೇವನ ಮೇಲಣ ಭಕ್ತಿ ಸಾಸಿವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತ ನೆಂಬರು, ಆನುಭಕ್ತನಲ್ಲಯ್ಯ, ಆನುವೇಷಧಾರಿಯಯ್ಯ. ಶರಣರ ಮನೆಯ ಮಗ ನಾನಯ್ಯ. ಜ್ಞಾನದ ಬಲದಿಂದ ಅಜ್ಞಾನ ಕೆಡುವುದು ನೋಡಯ್ಯ, ಜ್ಯೋತಿಯ ಬೆಳಗಿಂದ ಕತ್ತಲೆ ಕೆಡುವುದು ನೋಡಯ್ಯ. ಪರುಷದ ಬಲದಿಂದ ಅವಲೋಹ ಕೆಡುವುದು. ಅನುಭಾವಿಗಳ ಸಂಗದಿಂದ ಎನ್ನ ಭವ ಕೆಡುವುದು ನೋಡಯ್ಯ. ಈಗಲೇ ಹರಳಯ್ಯ ದೇವರ ಸನ್ನಿಧಿಗೆ ಹೋಗುವ ನಡೆ ಶೀಲವಂತಯ್ಯ" ಎಂದು ನೀಲನನ್ನೂ ಜತೆಯಲ್ಲಿ ಕರೆದು ಕೊಂಡು ಹರಳಯ್ಯನ ಮನೆಗೆ ತೆರಳಿದರು.

೨

ಬಸವದೇವರು ಜೀವನದಲ್ಲಿ ಸೋಲನ್ನು ಕಂಡುದಿಲ್ಲ. ಅವರ ಜೀವನದ ಸಾತ್ವಿಕ ತೇಜ ಎಲ್ಲ ನಡೆನುಡಿಯನ್ನೂ ಬೆಳಗಿಸುತ್ತಿತ್ತು. ಅವರ ಮಾತು ವರವಾಗುತ್ತಿತ್ತು, ಅವರ ಆಶೆ ಆಶೀರ್ವಾದವಾಗುತ್ತಿತ್ತು. ಅವರು ಬಯಸಿದ್ದು ಕೈಗೂಡುತ್ತಿತ್ತು. ಅಣ್ಣನವರನ್ನು ಪ್ರತಿಭಟಿಸಲು ಬರುತ್ತಿದ್ದವರು ಅವರ ತೇಜಸ್ಸಿನ ಪ್ರಚಂಡ ಕಾಂತಿಯಲ್ಲಿ ತಮ್ಮ ಕಿಡಿಯ ಬೆಳಕನ್ನು ತೇಲಿ ಬಿಡುತ್ತಿದ್ದರು.

ಆದರೆ ಮಧುವರಸ ಮಂತ್ರಿ ಮಾತ್ರ ತನ್ನ ನಂಬಿಕೆಯ ಬುಡವನ್ನು ಬಿಗಿದಪ್ಪಿದ. ಎದುರಿಗೆ ನವೋದಯ ವೃಕ್ಷ ಚಿಗುರಿ, ಪೂತು, ಫಲಿಸು ತ್ತಿದ್ದುದನ್ನು ನೋಡುತ್ತಿದ್ದರೂ ತನ್ನ ಒಣಗಿದ ಬೆಂಡು ಬುಡವೇ ಹೆಚ್ಚು ರಮ್ಯವೆಂದು ನಂಬಿದ್ದ. ಅನುಭವ ಮಂಟಪ ಸೋಮಾರಿಗಳ ಸಂತೆ ಯೆಂದು ಅವನ ಮತ. ಬಸವಣ್ಣನವರ ಸರಳತೆ ಶುದ್ಧ ಸೋಗೆಂದು

ಅವನ ನಂಬಿಕೆ. ಶರಣರ ನಡೆನುಡಿಯೆಲ್ಲಾ ವೇಷಕಟ್ಟಿದ ಕಾಪಟ್ಯವೆಂದೇ ಅವನ ದೃಢ ಭಾವನೆ. ಅನುಭವ ಮಂಟಪಕ್ಕೆ ಒಮ್ಮೆಯಾದರೂ ಮಧುವರಸನನ್ನು ಕರೆದೊಯ್ದು ಅಲ್ಲಿನ ವ್ಯವಹಾರದಲ್ಲಿ ಅವನು ಬೆರೆಯುವಂತೆ ಮಾಡಬೇಕೆಂಬ ಪ್ರಯತ್ನ ಸಫಲವಾಗಿರಲಿಲ್ಲ.

ನೀಲಾ ತನ್ನ ತಂದೆಯನ್ನು ಸುಮ್ಮನೆ ಬಿಟ್ಟಿರಲಿಲ್ಲ. ಅನುಭವ ಮಂಟಪದ ಸುದ್ದಿ ಸಮಾಚಾರಗಳನ್ನು ಎಷ್ಟು ಹೇಳಿದರೂ ಅವಳಿಗೆ ತೃಪ್ತಿಯಿಲ್ಲ. ತಂದೆಯು ಬೇಸರಪಟ್ಟುಕೊಂಡರೂ ಅವಳು ಆ ವಿಷಯವನ್ನು ಬಿಡುತ್ತಿರಲಿಲ್ಲ. ಅನುಭವ ಮಂಟಪಕ್ಕೊಮ್ಮೆ ತಂದೆಯನ್ನು ಕರೆದುಕೊಂಡೇ ಹೋಗಬೇಕೆಂದು ನಿಶ್ಚಯಿಸಿಕೊಂಡಿದ್ದಳು. ಬಸವಣ್ಣನವರೂ ತನ್ನ ತಂದೆಯೂ ಕೂಡಿ ಮನೆಗೆ ಬಂದುದನ್ನು ಕಂಡು ವಿಚಾರವನ್ನು ಈಗಲೇ ಪ್ರಸ್ತಾಪಿಸುವುದೊಳ್ಳೆಯದೆಂದು ಮನಗಂಡಳು. ಬಸವಣ್ಣನವರೇ ಮಾತು ತೆಗೆದರು.

"ನಿಮಗೆ ಏನೋ ಹೇಳಬೇಕೆಂದು ನೀಲಾ ಬಹಳ ಆತುರಪಡುತ್ತಿದ್ದಾಳೆ ಅರಸರೇ.

"ಏನದು ಹೇಳು ನೀಲಾ.?"

"ಇಲ್ಲ ಅಪ್ಪಾಜಿ. ನಾನು ಹೇಳಿದರೂ ನೀವು ನಡೆಸಿಕೊಡುವುದಿಲ್ಲ."

"ಹೇಳದೆಯೇ ನಡೆಸಿಕೊಡುವುದಿಲ್ಲ ಎನ್ನುತ್ತಾರೇನು ?"

"ಹಾಗಾದರೆ ನಡೆಸಿಕೊಡುವಿರೇನು ?"

"ಮೊದಲು ಹೇಳು....ಆ ಮೇಲೆ ನೋಡುವ."

"ಉಹೂ....ಅದಾಗದು...."

"ಏನದು ವಿಷಯ ಬಸವರಾಜರೇ ?"

"ಇಂದು ನಿಮ್ಮನ್ನು ಅನುಭವ ಮಂಟಪಕ್ಕೆ ಕರೆದೊಯ್ಯಬೇಕೆಂದು ನೀಲಾ ಉತ್ಸುಕಳಾಗಿದ್ದಾಳೆ....ಮುಂಜಾನೆ ನನ್ನೊಂದಿಗೆ ಪ್ರಸ್ತಾಪಿಸಿದಳು. ....ನಿಮ್ಮನ್ನು ಒಪ್ಪಿಸುವ ಭಾರ ನಾನು ಅವಳಿಗೇ ಹೊರಿಸಿದೆ."

"ಈಗ ಹೇಳಿ ಅಪ್ಪಾಜಿ ಬರುವಿರಾ ?"

" ಇಲ್ಲ ನೀಲಾ....ನನಗೆ ವ್ಯವಧಾನವಿಲ್ಲ. ದೊರೆಗಳ ಕೆಲಸ ಬಹಳ ಏದೆ. ಅಲ್ಲದೆ ಅನುಭವ ಮಂಟಪದಲ್ಲಿ ನನಗೆ ರುಚಿಸುವುದಾದರೂ ಏನು ?"

" ಧನವಲ್ಲ, ಕೀರ್ತಿಯಲ್ಲ, ಅಧಿಕಾರವಲ್ಲ."

" ಮತ್ತೆ."

" ಶಾಂತಿ. ಜೀವನದ ತುಮುಲ ವಿಪ್ಲವದಿಂದ ದೂರವಾದ ಅಮರ ಶಾಂತಿ."

" ನನಗೆ ಅದರ ಅವಶ್ಯಕತೆ ಇಲ್ಲ ಬಸವರಾಜರೇ. ಅವಶ್ಯಕತೆ ಬಿದ್ದಾಗ ನಾನೇ ತಿಳಿಸುವೆ."

ಆ ಮಾತುಗಳನ್ನು ಕೇಳಿ ಬಸವಣ್ಣನವರ ಕಣ್ಣುಗಳಲ್ಲಿ ನೀರು ತುಂಬಿತು. ಹೃದಯದಲ್ಲಿ ಒಂದು ವೇದನೆ ಹುಟ್ಟಿತು. ಆರ್ತತೆಯಿಂದ ಅರಸರನ್ನು ನೋಡುತ್ತಾ—

" ಜೀವನವೆಲ್ಲಾ ಶಾಂತಿ ಸಂಧಾನ. ಅದರ ಅವಶ್ಯಕತೆ ಎಲ್ಲರಿಗೂ.... ಎಲ್ಲ ಕಾಲದಲ್ಲಿಯೂ....ಉಂಟು. ಅರಸರೇ ಫಲಾಪೇಕ್ಷಿಗಳಾಗಿ ನೀವು ಅನುಭವ ಮಂಟಪಕ್ಕೆ ಬರಬೇಡಿ. ನನಗೋಸುಗ....ನನ್ನ ಮನಸ್ಸಿಗೆ ಸಂತಸ ವನ್ನು ನೀಡಲೋಸುಗ ಬನ್ನಿ. ಒಮ್ಮೆ ಇಷ್ಟನ್ನು ಕರುಣಿಸಲಾರಿರಾ."

" ಬನ್ನಿ ಅಪ್ಪಾಜಿ " ಎಂದು ನೀಲಾ ದನಿ ಸೇರಿಸಿದಳು.

ಅರಸರು ಚಿಂತೆಗೊಳಗಾದರು. ಸ್ವಲ್ಪ ಕಾಲ ಆಲೋಚಿಸಿ ಕತ್ತೆತ್ತಿ ಬಸವಣ್ಣನವರನ್ನು ನೋಡಿದರು. ಆ ತೇವಗೊಂಡ ಕಣ್ಣುಗಳಲ್ಲಿ ಮಿಡಿಯು ತ್ತಿದ್ದ ಸಹಾನುಭೂತಿ ಅರಸರನ್ನು ಬೆರಗುಗೊಳಿಸಿತು. ನಿಸ್ವಾರ್ಥತೆ ಯಿಂದ ಅವರು ಕೋರುತ್ತಿದ್ದುದನ್ನು, ಕೊಡಲಾಗದ ಕಾರ್ಪಣ್ಯವನ್ನು ತೋರಬಾರದೆಂದು ನಿಶ್ಚಯಿಸಿ,

" ಆಗಲಿ ಬಸವರಾಜರೇ—ಇಂದು ಬರುವೆ."

ಎಂದು ನುಡಿದರು. ಬಸವಣ್ಣನವರು ಆನಂದದ ಭರದಲ್ಲಿ ಮಧುವರಸ ರನ್ನು ಅಪ್ಪಿ 'ಧನ್ಯನಾದೆ ಧನ್ಯನಾದೆ' ಎಂದರು. ನೀಲಾ ಹಿಗ್ಗಿನಿಂದ ಕುಣಿದು ಕುಪ್ಪಳಿಸಿ, ತಂದೆಯನ್ನು ಮತ್ತೆ ಮತ್ತೆ ಅಪ್ಪಿ ಮುದ್ದಿಸಿದಳು.

ಬಸವಣ್ಣನವರು ನೀಲಾ ಮಧುವರಸರೊಂದಿಗೆ ಅನುಭವ ಮಂಟಪವನ್ನು ತಲುಪಿದಾಗ ಸಭೆ ಆರಂಭವಾಗಿರಲಿಲ್ಲ. ಶರಣವೃಂದವೆಲ್ಲಾ ಅಲ್ಲಮ ಪ್ರಭುವಿನ ನಿರೀಕ್ಷಣೆಯಲ್ಲಿತ್ತು. ಅವರನ್ನು ಕಣ್ತುಂಬ ಮನದಣಿಯ ನೋಡಿ ಅಣ್ಣನವರು ಆನಂದಭಾಷ್ಪವನ್ನು ಸುರಿಸಿ ಉದ್ದಂಡ ಪ್ರಣಾಮವನ್ನು ಸಲ್ಲಿಸಿದರು. ನೀಲನೂ ಅಣ್ಣನವರನ್ನನುಸರಿಸಿದುದನ್ನು ಕಣ್ಣ ಅಂಚಿನಲ್ಲಿಯೇ ಅತೃಪ್ತಿಯಿಂದ ಮಧುವರಸರು ನೋಡುತ್ತ ನಿಂತಿದ್ದರು. ಅನುಭವ ಮಂಟಪವೆಂದರೆ ನೀಚಕಾಯಕದವರ, ಹೀನಕುಲಜರ ಗೊಂದಲವೆಂದು ಭಾವಿಸಿಕೊಂಡಿದ್ದ ಅರಸರ ಅಭಿಪ್ರಾಯಕ್ಕೆ ಧಕ್ಕೆ ತಗುಲಿದಂತಾಯಿತು. ಒಂಪೆಡೆ ಸಕಲವನ್ನು ಈಶನಿಗರ್ಪಿಸಿ ಪ್ರಭುತ್ವವನ್ನು ಧಿಕ್ಕರಿಸಿ ಬಂದಿದ್ದ ಸಕಲೇಶ ಮಾದರಸ, ಅನೇಕ ಮಹಾ ಯುದ್ಧಗಳಲ್ಲಿ ವಿಜಯಶ್ರೀಯನ್ನು ಮೆಚ್ಚಿಸಿ ಬಂದಿದ್ದ ಜೋದರ ಮಾದಣ್ಣ, ಕುಶಲಶಿಲ್ಪಿ ಸೊನ್ನಲಿಗೆಯ ಸಿದ್ಧರಾಮಣ್ಣ, ಕೋಟ್ಯಾಧೀಶ್ವರ ಶ್ರೀಮಂತ ಆದಯ್ಯ, ಮತ್ತೊಂದೆಡೆ ಶಿವಾನುಭದಲ್ಲಿ ಹೆಸರಾದ ಅಂಬಿಗರ ಚೌಡಯ್ಯ, ಜೇಡರ ದಾಸಿಮಯ್ಯ, ಹಡಪದ ಅಪ್ಪಣ್ಣ, ಡೋಹರ ಕಕ್ಕಯ್ಯ, ಮೊಚ್ಚೆಗಾರ ಮಾದರ ಚನ್ನಯ್ಯ, ಮಡಿವಾಳ ಮಾಚಯ್ಯ, ಎಲ್ಲರಿಗೂ ಒಂದೇ ಸ್ಥಾನ, ಒಂದೇ ಮಾನ. ಶೂನ್ಯ ಸಿಂಹಾಸನದ ಸಮೀಪದಲ್ಲಿಯೇ ಶಿವಯೋಗಿನಿಯರೆಂದು ಹೆಸರಾಗಿದ್ದ ಸತ್ಯಕ್ಕ, ಮುಕ್ತಾಯಕ್ಕ, ಮಹಾದೇವಿಯಕ್ಕಗಳು ಮಂಡಿಸಿದ್ದರು. ಎಲ್ಲರ ಮುಖದಲ್ಲಿಯೂ ದಿವ್ಯವಾದ ಸಾತ್ವಿಕ ಕಳೆ, ನಡೆಯಲ್ಲಿ ನುಡಿಯಲ್ಲಿ ಸರಳವಾದ ದೈನ್ಯ, ನಿರಹಂಕಾರ. ಬಸವಣ್ಣನವರು ಅರಸರಿಗೆ ಎಲ್ಲ ಶರಣರ ಪರಿಚಯವನ್ನೂ ಮಾಡಿಕೊಟ್ಟರು. ಶರಣವೀರರು ತಮ್ಮ ಆಧ್ಯಾತ್ಮಿಕ ಸಮರದಲ್ಲಿ ಹೋರಾಡಿದ ಬಗೆಯನ್ನೂ ತೋರಿದ ಕೆಚ್ಚೆದೆಯನ್ನೂ ಹೆಮ್ಮೆಯಿಂದ ನಿರೂಪಿಸಿದರು. ಅಕ್ಕ ಮಹಾದೇವಿಯವರ ಬಳಿಗೆ ಬಂದಾಗ ಹರ್ಷದಿಂದ ಹಿಗ್ಗುತ್ತ—

"....ಕೂಡಲ ಸಂಗದೇವಯ್ಯ ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ"

ಎಂದು ಹಾಡಿದರು. ಅಕ್ಕನವರು ಆ ಮಾತನ್ನು ಕೇಳಿ ದೈನ್ಯದಿಂದ—

"ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣ ಭಕ್ತಿ

ಪ್ರಸಾದವ ಕೊಟ್ಟನು. ಚನ್ನ ಬಸವಣ್ಣನ ತೊತ್ತಿನ ಮಗಳಾದ ಕಾರಣ ಒಕ್ಕ ಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುವಿನ ಮಗಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳ ಮಾಚಿ ತಂದೆಯ ಮನೆಯ ಮಗಳಾದ ಕಾರಣ ನಿರ್ಮಳ ಪ್ರಸಾದವ ಸಿಕ್ಕಿಸಿ ಕೊಟ್ಟನು. ಇಂತೀ ಅಸಂಖ್ಯಾತರೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡವಿ ರಕ್ಷಿಸಿದ ಕಾರಣ ಚನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದೆನು."

ಎಂದು ಕಳಕಳಿಯಿಂದ ನುಡಿದುದನ್ನು ಕೇಳಿ ಚಕಿತರಾದರು. 'ಏನು ತೇಜಸ್ಸು, ಏನು ವಿನಯ; ಏನು ಸೌಂದರ್ಯ—ಏನು ತ್ಯಾಗ' ಎಂದು ಮನಸ್ಸಿನಲ್ಲಿಯೇ ಅಕ್ಕನವರ ದಿವ್ಯಾತ್ಮನಿಗೆ ಮಣಿದರು. ಆ ಹೊತ್ತಿಗೆ ಪ್ರಭುಗಳ ಸ್ವಾರಿ ಚಿತ್ತೈಸಲು ಎಲ್ಲರೂ ಎದ್ದು ನಿಂತು ಶೂನ್ಯ ಪೀಠವನ್ನು ಪ್ರಭುಗಳು ಅಲಂಕರಿಸಲು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತರು.

ಸಭೆ ಮೊದಲಾಯಿತು. ಚರ್ಚೆ ಆರಂಭವಾಯಿತು. ಶರಣರು ಜನತೆಯ ಸಂಶಯಗಳನ್ನು ಪರಿಹರಿಸಿ ತಮ್ಮ ದಿವ್ಯ ವಚನಗಳ ಕಾವ್ಯ ವಾಣಿಯಿಂದ ತಮೋ ಮೋಡಗಳನ್ನು ಚದುರಿಸತೊಡಗಿದರು. ಆತ್ಮೋತ್ಕ್ರಾಂತಿಯನ್ನು ಸಾಧಿಸಲು ಹೇಗೆ ಜಾತಿಮತಗಳು ಪ್ರತಿಬಂಧಕವಾಗುವು ದಿಲ್ಲವೆಂಬ ವಿಷಯ ವಿಪುಲ ಚರ್ಚೆಯಾಯಿತು. ಆತ್ಮೋತ್ಕ್ರಾಂತಿಯ ಬಗೆಯನ್ನು ಸಾಧಿಸುವ ಷಟ್-ಸ್ಥಲಗಳ ಲಕ್ಷಣಗಳನ್ನು ಚನ್ನಬಸವಣ್ಣನವರು ವಿವರವಾಗಿ ನಿರೂಪಿಸಿದರು.

ಆ ಅಮೃತವಾಣಿ ಮಧುವರಸರ ಮನಸ್ಸಿನಲ್ಲಿ ಬಗೆಬಗೆಯ ಭಾವ ಗಳನ್ನು ಕೆರಳಿಸತೊಡಗಿತು. ಆ ಕಸೋಟಿಯ ಮೇಲೆ ತಮ್ಮ ಜೀವನ, ಯೋಗ್ಯತೆಗಳನ್ನು ಒರೆಹಚ್ಚಿ ನೋಡತೊಡಗಿದರು. ಜೀವನದ ಗೌಣ ಪ್ರಧಾನ ವಿಷಯಗಳಿಗೂ ತಮ್ಮ ಕಲ್ಪನೆಗೂ ಇದ್ದ ತಾರತಮ್ಯವನ್ನು ವಿವೇಚಿಸತೊಡಗಿದರು.

ಆ ವೇಳೆಗೆ ಸಭೆ ಮುಗಿಯುತ್ತ ಬಂದಿತ್ತು. ಶರಣರೂ ಭಕ್ತರೂ ಒಬ್ಬೊಬ್ಬರಾಗಿ ಹೊರಟಿದ್ದರು. ಪ್ರಭುಗಳೂ ಹೊರಟು ಹೋಗಿದ್ದರು. ಚರ್ಚೆ ನಡೆಯುತ್ತಿದ್ದಾಗ ಅರಸರ ದೃಷ್ಟಿ ಒಬ್ಬ ತರುಣನ ಮೇಲೆ

ಬಿದ್ದಿತ್ತು. ಅವನು ಕೇಳುತ್ತಿದ್ದ ಪ್ರಶ್ನೆಗಳ ಹಿಂದಿನ ಶ್ರದ್ಧೆ, ಜಿಜ್ಞಾಸೆ ಅರಸರ ಗಮನವನ್ನತ್ತ ಸೆಳೆದಿದ್ದವು. ಬಸವಣ್ಣನವರು ಪ್ರಭುಗಳನ್ನು ಬೀಳ್ಕೊಂಡು ಬರಲು ಅರಸರು,

"ಈ ತರುಣ ಯಾರು ಬಸವರಾಜರೇ" ಎಂದರು.

"ಅವನೊಬ್ಬ ತೇಜಸ್ವಿ. ಅನುಭವ ಮಂಟಪದ ಒಂದು ಕಳಸ."

"ಕ್ಷಮಿಸಬೇಕು ಅರಸರೇ. ಅಣ್ಣನವರು ನನ್ನ ಯೋಗ್ಯತೆಯನ್ನು ಉತ್ಪ್ರೇಕ್ಷೆ ಮಾಡಿದ್ದಾರೆ. ನಾನೊಬ್ಬ ಬಡ ಅಂತ್ಯಜ. ವೃತ್ತಿಯಲ್ಲಿ ಮೊಚ್ಚಿಗಾರ. ನನ್ನ ತಂದೆಯ ಹೆಸರು ಹೇಳಿದಲ್ಲಿ ತಮಗೆ ನನ್ನ ಸಹಜ ಪರಿಚಯವಾಗುತ್ತದೆ. ನಾನು ಮೊಚ್ಚಿಗಾರ ಹರಳಯ್ಯನ ಮಗ."

"ಹರಳನ ಮಗನೇ ?"

"ಹೌದು ಧರ್ಮವೀರ ಹರಳಯ್ಯನವರ ಮಗ."

ಎಂದು ಬಸವಣ್ಣನವರು ನುಡಿದರು. ಅರಸರ ಮುಖ ಬಣ್ಣಗೆಟ್ಟಿತು. ಚಿಂತೆಯ ಕಪ್ಪುನೆರಳು ಮುಖವನ್ನು ಆಚ್ಛಾದಿಸಿತು. ಮನಸ್ಸನ್ನು ಯಾವದೋ ಉಮ್ಮಳ ಮುತ್ತಿತು.

"ಹಿಂದೆ ನಾನೊಂದು ಅಪರಾಧವನ್ನು ಮಾಡಿದೆ ಬಸವರಸರೇ. ಒಂದು ದಿವಸ ನಾನು ಬೀದಿಯಲ್ಲಿ ಬರುತ್ತಿರಲು ಎದುರಿಗೆ ಹರಳ ಬಂದ. ಅವನ ಕೈಯಲ್ಲಿ ಉತ್ತಮವಾದ ಒಂದು ಜತೆ ಮೊಚ್ಚೆಯಿತ್ತು. ಅದನ್ನು ನಾನು ಬಯಸಿದೆ. ಹರಳ ಅದನ್ನು ನಿಮಗೆ ಮೀಸಲು ಮಾಡಿರುವುದಾಗಿ ತಿಳಿಸಿದ. ನಾನು ಕ್ಷುದ್ರ ಕೋಪವನ್ನು ತಾಳಿ ಕಾಪಿನವರಿಂದ ಅವನನ್ನು ಚೆನ್ನಾಗಿ ಪ್ರಹರಿಸಿದೆ."

"'ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಲುಬಹುದು. ಸಿರಿಗರ ಹೊಡೆದವರ ನುಡಿಸಲ ಬಾರದು ನೋಡಯ್ಯ! ಬಡತನವೆಂಬ ಮಂತ್ರವಾದಿ ಹೊಗಲು, ಒಡನೆ ನುಡಿವರಯ್ಯಾ, ಕೂಡಲ ಸಂಗಮ ದೇವಾ' ಎಂದು ಬಸವರಾಜರೊಮ್ಮೆ ನುಡಿದಿರುವರು ಅರಸರೇ" ಎಂದು ಶೀಲವಂತ ನುಡಿದ.

ಬಸವಣ್ಣನವರು ಅರೆಮುನಿಸಿನಿಂದ ಶೀಲವಂತನ ಕಡೆ ನೋಡಿದರು, ಮಧುವರಸರು—

"ಚಿರಂಜೀವಿ ಹೇಳಿದುದು ಸತ್ಯವಾದ ಮಾತು ಬಸವರಸರೇ, ನಾನು ಅಕೃತ್ಯವನ್ನೆಸಗಿದ ಪಾಪಿ. ಅದಕ್ಕೆ ಕ್ಷಮೆ ಬೇಡಲು ಸಿದ್ಧನಿರುವೆ. ಅದಕ್ಕೆ ಏನು ಪ್ರಾಯಶ್ಚಿತ್ತ ಬೇಕಾದರೂ ಅನುಭವಿಸಲು ಸಿದ್ಧನಿರುವೆ."

"ಪಶ್ಚಾತ್ತಾಪವೇ ಪ್ರಾಯಶ್ಚಿತ್ತ. ದುಃಖವನ್ನು ದೂರಮಾಡಿರಿ. ಶೀಲನರಿಯದೆ ನುಡಿದನಲ್ಲದೆ ನಿಮ್ಮ ಮನವನ್ನಳುಕಿಸುವುದಕ್ಕಲ್ಲ. ಅಲ್ಲವೇ ಶೀಲಾ."

"ಹೌದು, ನನ್ನ ದೊರೆ. ನನ್ನ ಅಪರಾಧವನ್ನು ಕ್ಷಮಿಸು" ಎಂದು ಮಧುವರಸರ ಪಾದಗಳ ಮೇಲೆ ಉರುಳಿದ. ಅರಸರ ಕಣ್ಣುಗಳಲ್ಲಿ ಅನುಕಂಪದ ಹನಿಗಳು ಕೂಡಿದವು. ಶೀಲನನ್ನೆತ್ತಿ ಅಪ್ಪಿ—

"ಎಂತಹ ಸತ್ಯವಾದ ಹೆಸರು ನಿನ್ನದು ಕಂದಾ ಶೀಲಾ, ಶೀಲವಂತನಾಗಿಯೇ ಯಾವಾಗಲೂ ಬಾಳು."

ಎಂದು ಶೀಲನನ್ನೂ ಬಸವಣ್ಣನವರನ್ನೂ ಕೂಡಿ ಗೃಹಾಭಿಮುಖರಾದರು.



ಮಧುವನದಲ್ಲಿ ಒಂದು ಇರುಳು. ಜಗತ್-ಜೀವನದಲ್ಲಿ ತನ್ನ ಕರ್ತವ್ಯವನ್ನು ಪರಿಪಾಲಿಸಲು ಚಂದ್ರಮನು ಮೋಡಗಳ ಅಡ್ಡಿ ಆತಂಕಗಳನ್ನು ಕಡೆಹಾಯ್ದು ರಥಾರೂಢನಾಗಿ ಬರುತ್ತಿದ್ದಾನೆ. ಮಧ್ಯೆಮಧ್ಯೆ ಇಣಿಕಿಣಿಕಿ ನೋಡುತ್ತಾನೆ. ಕತ್ತಲಿನಲ್ಲಿ ಮಿಣುಕುಹುಳು ಸುಳಿದಂತೆ ಒಂದರೆಕ್ಷಣ ಬೆಳಗಾಗಿ ಮತ್ತೆ ಕತ್ತಲು ಮೂಡುತ್ತದೆ. ಆ ಕತ್ತಲೆ ಬೆಳಕುಗಳ ಆಟವನ್ನು ನೋಡುತ್ತಾ ವನದ ಹಕ್ಕಿಪಕ್ಷಿಗಳು ಆನಂದಿಸಿ ಹಾಡುತ್ತಿದ್ದವು. ಪುಷ್ಪವತಿಯರಾಗಿ ಬಳುಕಿ ಬೆಡಗನ್ನು ಬೀರುತ್ತಾ ತಮ್ಮ ರಮ್ಯತೆಯ ಪ್ರದರ್ಶನ ಹೂಡಿದ್ದ ಪುಷ್ಪಗಳನ್ನು ನೋಡುತ್ತಾ ಅವುಗಳ ತಂಗಿಯರು ತಾವೂ ಹಾಗೆಯೇ—ಅದಕ್ಕೂ ಹೆಚ್ಚಾಗಿ—ಮೋಹಾಕರ್ಷಣ ಮಾಡಬೇಕೆಂದು ಬಯಸುತ್ತಿದ್ದವು. ಮಂದಾನಿಲನು ನಿಶಾರಾಣಿಯಿಂದ ಉಡುಗೆರೆ ತಂದು ಹಂಚುತ್ತಿದ್ದ ಸೌಗಂಧದ ನಿಷೆಗೆ ಮತ್ತರಾದ ವೃಕ್ಷಪರ್ಣಗಳು ಮರ್ಮರದಿಂದ ತಮ್ಮ ಸ್ಥಿತಿಯನ್ನು ತೋರುತ್ತಿದ್ದವು. ಪ್ರಕೃತಿ ಅಂದು ಆನಂದಮಯವಾದ

ಒಂದು ಗಭೀರ ಭಾವನೆಯಲ್ಲಿ ಸಮಾಧಿಗೊಂಡಂತಿತ್ತು. ಮುಖದ ಮೇಲೆ ಮೂಡಿದ್ದ ನಸುನಗೆ ಅವಳ ಗಭೀರ ಭಾವನೆಗೆ ಹೊಳಪು ಕೊಟ್ಟಿತ್ತು.

ಅಂತಹ ಭಾವನೆಯ ಹೊನಲಿಗೆ ಸಿಕ್ಕಿದ್ದ ತರುಣ ತರುಣಿಯರಿಬ್ಬರು ವನದ ವೃಕ್ಷವೊಂದರ ಕೆಳಗೆ ಕುಳಿತು ಪ್ರಕೃತಿಯ ಲೀಲೆಯನ್ನು ನೋಡಿ ಆನಂದಿಸುತ್ತಿದ್ದರು. ಎದುರಿಗೆ ಕೈಬರಹದ ಒಂದು ಹೊತ್ತಗೆ. ಮಾತಿಲ್ಲದ ನೀರವತೆಯೂ ಅಲ್ಲ; ಬಹಳ ಮಾತು ಕಂಡ ಚರ್ಚೆಯ ಗಲಭೆಯೂ ಅಲ್ಲ. ಮಧ್ಯೆ ಮಧ್ಯೆ ಒಂದೊಂದೇ ಮಾತು.

"ಆ ವಚನವನ್ನೇ ಇನ್ನೊಮ್ಮೆ ಓದು ಶೀಲಾ"

"ಉಂಬುವುದು ಉಡುವುದು ಶಿವಾಚಾರ, ಕೊಂಬುವುದು ಕೊಡುವುದು ಕುಲಾಚಾರ ಎಂಬ ಅನಾಚಾರಿಯ ಮಾತು ಕೇಳಲಾಗದು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರು, ಒಂದೇ ಎಂದು ಕೊಟ್ಟು ಕೊಂಬುದು ಸದಾಚಾರವು. ಉಳಿದವೆಲ್ಲವು ಅನಾಚಾರ. ಎಂತೆಂದೊಡೆ, ಪಟಕದ ಕೊಡದಲ್ಲಿ ಕಾಳಿಕೆಯನರಸುವ ಹಾಗೆ, ಅಮೃತದೊಳಗೆ ವಿಷವನರಸುವ ಹಾಗೆ, ಸಿಹಿಯೊಳಗೆ ಕಹಿಯನರಸುವ ಹಾಗೆ. ಎಂತೆಂದೊಡೆ ರಜಸೂತಕ, ಕುಲಸೂತಕ, ಜನನಸೂತಕ, ಪ್ರೇತಸೂತಕ, ಉಚ್ಛಿಷ್ಟ ಸೂತಕ ಎಂದೊಡೆ ಆತಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಸ್ಪರ್ಶವಿಲ್ಲ, ಪ್ರಸಾದವಿಲ್ಲ ಇಂತೀ ಪಂಚಸೂತಕವ ಕಳೆದಲ್ಲದೆ ಭಕ್ತನಾಗ. ಇಂಥ ಭಕ್ತರಲ್ಲಿ ಕೊಟ್ಟು ಕೊಂಬುದು ಸದಾಚಾರ ಕೂಡಲ ಸಂಗದೇವಯ್ಯ."

"ನಿನ್ನನ್ನೂ ಕುಲಹೀನನೆನ್ನುವರಲ್ಲವೇ?"

"ನಮ್ಮನ್ನುದ್ಧರಿಸಿದ ಭಕ್ತಿ ಭಂಡಾರಿಯೂ ಕುಲಹೀನನಾಗಿರುವನು—ಶಿವಸ್ವರೂಪಿ ಚನ್ನಬಸವಣ್ಣನೂ ಕುಲಹೀನ—ಆದರೆ ವ್ಯಾಸ, ಸಾಂಖ್ಯ, ಮಾರ್ಕಂಡೇಯ, ಧಧೀಚಿ, ಕಶ್ಯಪ, ದುರ್ವಾಸ ಇವರೆಲ್ಲ ವಿಪ್ರರ ಮಕ್ಕಳೇ? ವಿಪ್ರರೇ?"

"ಹೌದು, ಇದನ್ನು ನಾವು ಆಡಿದರೇನು? ಮಾಡಿ ತೋರಿಸಬೇಕು. ಶಿವಾಚಾರವನ್ನನುಸರಿಸುವ ಹಾರುವ ಹೊಲೆಯರಿಗೆ ಭೇದವಿಲ್ಲವೆಂಬುದನ್ನು........"

" ಹೇಗೆ--ನೀಲಾ."

" ಹೇಗೆಂದರೆ........ನಾನು........ನಿನ್ನನ್ನು .........."

" ನೀಲಾ........"

" ಶೀಲಾ........"

" ಇದು ಏನು ಮಾತು?"

" ಏತಕ್ಕೆ? ಅಣ್ಣನವರು ಹೇಳಿಲ್ಲವೆ ' ಆವ ಕುಲವಾದರೇನು ?— ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೇ ಶರಣರಲ್ಲಿ ಜಾತಿ ಸಂಕರವಾದ ಬಳಿಕ ' ಎಂದು."

" ಆದರೆ ನೀಲಾ........"

" ಹಾಗಾದರೆ ನಿನಗೊಪ್ಪಿಗೆಯಿಲ್ಲವೇ ?"

" ನೀಲಾ ಒಪ್ಪಿಗೆಯೇ ! ಅಯ್ಯೋ....ನನ್ನ ಜೀವನದ ತಪಸ್ಸೇ ಅಲ್ಲವೇ ಅದು. ಆದರೆ ನಾನೆಷ್ಟರವನು. ನನಗೆ ಅಲಭ್ಯವಾದುದನ್ನು ಬಯಸಿ ಏನು ಸಾರ್ಥಕ ಎಂದು ಸುಮ್ಮನಿದ್ದೆ. ನಾನು ನೀನೂ ಈ ವಿಶ್ವಧರ್ಮದ ಕೀರ್ತಿ ಧ್ವಜವನ್ನು ಹಿಡಿದು ಇವರ ಪಾಂಚಜನ್ಯದಿಂದ ನಿದ್ರಿತ ಜಗತ್ತನ್ನು ಎಚ್ಚರಿಸ ಬೇಕೆಂದು ಎಷ್ಟೋ ಎಣಿಕೆ ಹಾಕಿಕೊಂಡಿರುವೆ. ಪ್ರಗತಿ ರಥದ ಎರಡು ಗಾಲಿಗಳಾಗಿ ನೀನೂ ನಾನೂ ಪ್ರೇಮ, ಐಕ್ಯತೆ, ಬಾಂಧವ್ಯಗಳ ಶತ್ರುಗಳನ್ನು ನುಚ್ಚುನೂರು ಮಾಡಬೇಕೆಂದು ಬಯಸಿರುವೆ."

" ಧನ್ಯೆ....ಧನ್ಯೆ ...ನಾನು ಧನ್ಯಳಾದೆ. ಸಾವಿತ್ರಿ ಸತ್ಯವಾನನ ಕೈ ಹಿಡಿದು ಸಾವನ್ನು ಜಯಿಸಿದಳು. ಆದರಿಂದು ಸಾವಿಗೂ ಅಧಿಕವಾದ ಅಸಹನೆ, ಅಹಂಭಾವ, ಅನೈಕ್ಯತೆಗಳೆಂಬ ಪೀಡನೆಗಳನ್ನು ಜಯಿಸಬೇಕಾಗಿದೆ."

" ಹೌದು. ಸತ್ಯವನ್ನೇ ನುಡಿದೆ. ಪ್ರೇಮವು ಪ್ರಗತಿಯ ಪೀಠವಾಗ ಬೇಕು. ಸ್ತ್ರೀ ಪುರುಷ ಸಂಬಂಧ ಕಾಮದ ಎಲ್ಲೆಯನ್ನು ಮೀರಬೇಕು. ಆಗಲೇ ಜಗತ್ತಿಗೆ ಹಿತ, ವ್ಯಕ್ತಿಗೆ ಶ್ರೇಯಸ್ಸು."

" ಅಕ್ಕ ಮಹಾದೇವಿಯವರು ಹೇಳಿದಂತೆ ' ಕೇಡಿಲ್ಲದ ರೂಹಿಲ್ಲದ ಚಲುವಂಗೆ ' ಒಲಿಯಬೇಕು."

"ಆದರವರು ಅದನ್ನು ಈಶ್ವರನಿಗೆ ಅನ್ವಯಿಸಿ ಹೇಳಿದ್ದು. ನೀನು ರೂಹಿಲ್ಲದ ನಶ್ವರನಿಗೆ ಒಲಿದಿರುವೆಯಲ್ಲಾ."

"ನಾನು ನನ್ನ ನಶ್ವರನಲ್ಲಿಯೇ ಈಶ್ವರನನ್ನು ಕಾಣುವೆ. ನಿನ್ನಲ್ಲಿಯೇ ನನ್ನ ಕಾಶಿ ಶ್ರೀಶೈಲಗಳನ್ನರಸುವೆ."

"ತಥಾಸ್ತು."

ಎಂದು ಕತ್ತೆತ್ತಿ ನೋಡಿದ. ಚಂದ್ರಮನ ಶೀತಲ ಕಿರಣಕಾಂತಿ ಎಲ್ಲೆಲ್ಲಿಯೂ ಹಾಲು ಚೆಲ್ಲಿದಂತೆ ಹರಡಿತ್ತು. ಪ್ರಕೃತಿ ತನ್ನ ಎಲ್ಲ ಚೇತನಗಳನ್ನು ಜಾಗೃತಗೊಳಿಸಿ ಆನಂದವನ್ನು ಚೆಲ್ಲುತ್ತಿದ್ದಂತಿತ್ತು. ತಾವು ಹಾಡಿದಲ್ಲಿ ಎಲ್ಲಿ ಪ್ರಕೃತಿಯ ಆನಂದ ತಪಕ್ಕೆ ಭಂಗವುಂಟಾಗುವುದೋ ಎಂದು ಸುಮ್ಮನಾಗಿದ್ದವು. ಎಲೆಗಳು ಮರ್ಮರಗುಟ್ಟುವುದನ್ನು ನಿಲ್ಲಿಸಿ ಪ್ರಕೃತಿಯ ಲೀಲೆಯನ್ನು ಎವೆಯಿಕ್ಕದೆ ನೋಡುತ್ತಿದ್ದವು. ಇಬ್ಬರು ಪ್ರಣಯಿಗಳೂ ಮೆಲ್ಲನೆದ್ದು ಅವ್ಯಕ್ತದಿಂದ ವ್ಯಕ್ತಕ್ಕೆ, ಜೀವನದ ಆಕಾಶದಿಂದ ಭೂಮಿಗೆ ನಡೆದರು.

ಈ ವಾರ್ತೆ ಕೇಳಿ ಬಸವಣ್ಣನವರು ಹಿಗ್ಗಿದರು. ತಾವು ಯಾವದನ್ನು ಸಾಧಿಸಬೇಕೆಂದು ಸಂಕಲ್ಪಿಸಿಕೊಂಡಿದ್ದರೋ ಅದು ಇಷ್ಟು ಬೇಗ ಕೈಗೂಡಿದುದನ್ನು ಕಂಡು ಅವರ ಆನಂದಕ್ಕೆ ಪಾರವೇ ಇಲ್ಲದೆ ಹೋಯಿತು. ಊರಿನಲ್ಲಿ ಸುದ್ದಿ ಮಸಕುಮಸಕಾಗಿ ಹರಡಲಾರಂಭಿಸಿತು. ಶೀಲವಂತನ ನಡತೆಯನ್ನು ಶಿವಶರಣರು ಮೆಚ್ಚಿ ಹರಸಿದರು. ಈ ಮೈತ್ರಿಯಿಂದ ಅನಾದ್ಯವಾದ ಭಿನ್ನಭೇದಗಳು ಹೋಗುವವೆಂದು ಅವರು ದೃಢವಾಗಿ ನಂಬಿದರು.

ಆದರೆ ಕಲ್ಯಾಣನಗರವೆಲ್ಲಾ ಬಸವಣ್ಣನವರ ಅನುಯಾಯಿತನವನ್ನು ಸ್ವೀಕರಿಸಿರಲಿಲ್ಲ. ಬ್ರಾಹ್ಮಣ್ಯವನ್ನು ತೊರೆದು ವರ್ಣಸಂಕರ ಮಾಡುವುದಕ್ಕೆ ಹೊರಟವನೆಂದು ಹೆಸರಿಟ್ಟು ಅಣ್ಣನವರನ್ನು ಬ್ರಾಹ್ಮಣ ತಂಡ ವಿರೋಧಿಸುತ್ತಲೇ ಬಂದಿತ್ತು. ಅವಕಾಶ ಸಿಕ್ಕಿದಾಗಲೆಲ್ಲಾ ಅರಸನಲ್ಲಿ ದೂರು ಹೇಳಿ ಅದಷ್ಟು ಧರ್ಮಪ್ರಚಾರ ಕಾರ್ಯಕ್ಕೆ ವಿಘ್ನವನ್ನು ಆಚರಿಸುತ್ತಲೇ ಬಂದಿದ್ದರು. ಈ ಕೊಂಡೆಯರ ಮಾತು ಕೇಳಿಕೊಂಡು ಬಿಜ್ಜಳ ಭೂಪಾಲ ಅಣ್ಣನವರನ್ನು ಆಗಾಗ್ಗೆ ಪರೀಕ್ಷೆಗೊಳಗಾಗಿಸುತ್ತಲೇ ಇದ್ದ.

ಬ್ರಾಹ್ಮಣ ಕನ್ಯೆಯನ್ನು ಹೊಲೆಯರ ತರುಣನಿಗೆ ಕೊಟ್ಟು ವಿವಾಹ ಮಾಡುವ ಸುದ್ದಿ ಕೇಳಿ ಅರಸ ಆಗ್ರಹದಿಂದಕಂಪಿಸತೊಡಗಿದ. ಅಣ್ಣನವರನ್ನು ನಾಶಗೊಳಿಸುವಷ್ಟು ರೋಷ ಅವನ ಸಹನೆಯ ಪರಿಯನ್ನು ಅಲುಗಿಸತೊಡಗಿತು. ಆದರೆ ಅದು ತನಗೆಲ್ಲಿ ವಿರೋಧವಾಗಿ ಪರಿಣಮಿಸುವುದೋ ಎಂದು ಹೆದರಿ ಸುಮ್ಮನಾಗಿದ್ದ. ಒಂದೊಂದು ಸಲ ಕೊಂಡೆಯರ ಮಾತು ಕೇಳಿ ಮಾನಭಂಗ ಹೊಂದಿದ್ದುದನ್ನು ಜ್ಞಾಪಿಸಿಕೊಂಡು ಇದೂ ಸುಳ್ಳಿರಬಹುದೆಂದು ಅರಸ ನಂಬಿದ; ಸುಳ್ಳಾಗಲೆಂದು ಬಯಸಿದ. ಒಂದುವೇಳೆ ವಾರ್ತೆ ನಿಜವಾಗಿ ಪರಿಣಮಿಸಿದರೆ ತಾನು ಏನು ಮಾಡಬೇಕೆಂದು ಯೋಚಿಸಿದ. ಪಕ್ಕದಲ್ಲಿದ್ದ ಬೊಮ್ಮಣ್ಣ ಮಂತ್ರಿಯ ಸಲಹೆ ಸೂಕ್ತವಾಗಿ ತೋರಿತು.

"ಹೌದು, ಹೌದು ಇದನ್ನು ಬೆಳೆಯತೊಡಗಿದರೆ ನಾಳಿನ ಸ್ಥಿತಿ ಕಠಿಣವಾಗಬಹುದು. ಬಸವರಾಜ ರಾಜ್ಯವನ್ನು ತಾನೇ ಆಕ್ರಮಿಸಿಕೊಂಡು ನನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಬಹುದು....ಬಸವನ ಕೆಚ್ಚು ಮುರಿಯಲು ಇದೇ ಸದವಕಾಶ. ಅರಸ ದುರ್ಬಲನಸಲ್ಲನೆಂದು ತೋರಲು ಇದೇ ಉತ್ತಮ ಸನ್ನಿವೇಶ"ವೆಂದು ನಿರ್ಧರಿಸಿಕೊಂಡ. ಬೊಮ್ಮಣ್ಣ ಮಂತ್ರಿಯ ಮುಖದಲ್ಲಿ ತೃಪ್ತಿಯ ನಗೆ ತೇಲಿತು. ತಾನಾಗಲೇ ಬಸವರಸರ ಸ್ಥಾನದಲ್ಲಿ ಪ್ರಧಾನಿ ಪಟ್ಟದಲ್ಲಿರುವುದನ್ನು ಮನಸ್ಸಿಗೆ ತಂದುಕೊಂಡು ತೃಪ್ತನಾದ.

೪

ಅನುಭವಮಂಟಪದಲ್ಲಿ ಶಿವಯೋಗಿಶ್ರೇಷ್ಠ ಪ್ರಭುದೇವರ ಸನ್ನಿಧಿಯಲ್ಲಿ ಶೀಲವಂತಯ್ಯ, ನೀಲಪ್ಪೆಯರ ಲಗ್ನ ಸಾಂಗವಾಗಿ ನಡೆಯಿತು. ಪ್ರೇಮದ ದಿಗ್ವಿಜಯವನ್ನು ಮೊಳಗುವಂತೆ ಮಂಗಳವಾದ್ಯಗಳು ನಿನಾದಗೊಂಡವು. ಮಧುವರಸ ಮಂತ್ರಿಗಳು ತಮ್ಮ ಐಶ್ವರ್ಯ ಪದವಿಗಳನ್ನು ಮರೆತು ಬಡ ಹರಳಯ್ಯನನ್ನು ಆದರದಿಂದ ಬಿಗಿದಪ್ಪಿದರು. ಶರಣವೃಂದವೆಲ್ಲಾ ಈ ವಿವಾಹ ಭಾರತೀಯ ಧಾರ್ಮಿಕ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಿಸುವುದೆಂದು ನಂಬಿದರು. ಮಧುವರಸ, ನೀಲವ್ವೆಯರ ಸಾಹಸ, ಎದೆಗಾರಿಕೆಗಳನ್ನು ಕೊಂಡಾಡಿದರು.

ಬಸವಣ್ಣನವರು ವಧೂವರರನ್ನು ಆಶೀರ್ವದಿಸುತ್ತಾ ಸಭೆಯನ್ನು ಕುರಿತು—

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬಿರಿ. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರನೇನೆಂಬೆನಯ್ಯ? ಇವರನೆಂತು ಭಕ್ತರನೆಂಬೆನಯ್ಯ? ಇವರನೆಂತು ಯುಕ್ತರನೆಂಬೆನಯ್ಯ? ಇವರು ವಜ್ಯೋಚ್ಚಿ ಭಕ್ತರು, ವಚ್ಯೋಚ್ಚಿ ಭವಿಗಳು. ಸರ್ವರೂ ರುದ್ರಗಣಗಳೆಂಬೆ. ಸರ್ವರೂ ಸದ್ಭಕ್ತ ರೆಂಬೆ. ಅವರಲ್ಲಿ ಕುಲವ ನೋಡದೆ ಆಚಾರವ ನೋಡಿ ಅವರಿಂಗೆ ಬೇಕಾದ ಹೆಣ್ಣು ಕೊಟ್ಟು, ತಮಗೆ ಬೇಕಾದ ಹೆಣ್ಣು ತಂದುಕೊಂಬುದು. ಈ ಕ್ರಮವ ನರಿಯದವರ ಭಕ್ತಿ ಹೊಲತಿ ಶುದ್ಧ ನೀರ ಮಿಂದಂತಾಯಿತ್ತು ಕೂಡಲ ಸಂಗಮದೇವಾ"

ಎಂದು ತಮ್ಮ ಸಂದೇಶವನ್ನು ಸಾರಿದರು. ಪ್ರಭುಗಳು ವಧೂವರರನ್ನು ಆಶೀರ್ವದಿಸುತ್ತಾ—

"ಸತಿ ಭಕ್ತೆಯಾದರೆ ಹೊಲೆಗಂಜಲಾಗದು. ಪತಿ ಭಕ್ತನಾದಡೆ ಕುಲಕ್ಕಂಜಲಾಗದು. ಸತಿಪತಿ ಎಂಬ ಅಂಗಸುಖ ಹಿಂಗಿ ಲಿಂಗವೇ ಪತಿ ಯಾದ ಬಳಿಕ ಸತಿಗೆ ಪತಿಯುಂಟೇ? ಪತಿಗೆ ಸತಿಯುಂಟೇ? ಪಾಲುಂಡು ಮೇಲುಂಬರೇ ಗುಹೇಶ್ವರಾ"

ಎಂದು ನುಡಿದರು. ವಿವಾಹಮಂಟಪ ಜಯಘೋಷದಿಂದ ಸಂರಾವ ಗೊಂಡಿತು. ಆನಂದವೇ ರೂಪವೆತ್ತು ಬಂದಂತೆ ಎಲ್ಲರೂ ವಧೂವರರನ್ನು ಬಗೆಬಗೆಯಾಗಿ ಹರಸಿ, ಹಾಡಿ ಹೊಗಳಿದರು. ಎಲ್ಲವನ್ನೂ ನೋಡುತ್ತ ನಿಂತಿದ್ದ ಬಸವಣ್ಣನವರ ಕಣ್ಣಿಂದ ಒಂದೆರಡು ಹನಿಗಳುದುರಿದವು. ಇದೇ ಆನಂದ ಯಾವಾಗಲೂ ಮಾನವ ಕೋಟಿಯ ಹೃದಯ ಸಾಮ್ರಾಜ್ಯ ವನ್ನಾಳಬಾರದೇತಕ್ಕೆ? ಮಾನವನ ಬಾಳೆಲ್ಲವೂ ಯಾವಾಗಲೂ ಸತ್ಯ, ಪ್ರೇಮ, ಜ್ಞಾನಗಳೊಂದಿಗೆ ಮಿಲನಹೊಂದಬಾರದೇತಕ್ಕೆ? ಎಂದು ಚಿಂತಿಸಿದರು.

ಬಿಜ್ಜಳರಾಯನ ಆಳ್ವಿಕೆಯಲ್ಲಿ ಅದು ಸಾಧ್ಯವಿರಲಿಲ್ಲ. ಅರಸನ ಕಟು ಧರ್ಮದೊಂದಿಗೆ ಕೊಂಡೆಯರ ಚಾಡಿ ಮಾತುಗಳು ಬೆರೆತು ಶರಣರಿಗೆ ಉಳಿಗಾಲವಿಲ್ಲದಂತಾಗಿತ್ತು. ಶೀಲವಂತಯ್ಯನ ವಿವಾಹದ ಸುದ್ದಿ ರಾಯನ

ಕಿವಿಮುಟ್ಟಿದ ಮೇಲಂತೂ ಅವನ ಕೋಪ ಅಳತೆ ಮೀರಿತು. ಸ್ಥೈರಣೆಯು ಬಳಿಯಲ್ಲಿ ಸುಳಿಯಲು ಹೆದರಿತು. ಆದರಲ್ಲಿ ಬಸವಣ್ಣನವರ ಆಸಕ್ತಿಯನ್ನರಿತ ಮೇಲಂತೂ ರಾಯನು ಇದು ಶಾಸನಾರ್ಹವಾದುದೆಂದು ನಿಶ್ಚಯಿಸಿದ. ಮಧುವರಸ ಮಂತ್ರಿ ಸ್ವಯಂ ಬ್ರಾಹ್ಮಣನಾಗಿ, ಅರಸನೋಲಗದ ಮಂತ್ರಿಯಾಗಿ, ಆಗರ್ಭ ಶ್ರೀಮಂತನಾಗಿ ತನ್ನ ಮಗಳನ್ನು ಹೊಲೆಯರ ಮಗನಿಗೆ ಕೊಟ್ಟು ವಿವಾಹ ಮಾಡಿಕೊಟ್ಟುದು ರಾಯನಿಗೆ ಅಕ್ಷಮ್ಯವಾದುದಾಗಿ ಕಂಡುಬಂತು.

ಬೆಳಕುಹರಿಯುವ ಹೊತ್ತಿಗೆ ಸೈನಿಕರು ಮಧುವರಸ, ಹರಳೈಯ್ಯ, ಶೀಲವಂತ, ನೀಲವ್ವೆಯರನ್ನು ಸೆರೆಹಿಡಿದು ಅರಸನ ಮುಂದೆ ನಿಲ್ಲಿಸಿದರು. ಅರಸನೇ ಸ್ವಯಂ ನ್ಯಾಯತೀರ್ಸಿಗೆ ಕುಳಿತಿದ್ದ. ಅಕ್ಕಪಕ್ಕದಲ್ಲಿ ಬೊಮ್ಮಣ್ಣ ಮಂತ್ರಿ ಮತ್ತು ಇತರ ಕೊಂಡೆಯರು. ಬಸವಣ್ಣನವರಿಗೆ ಸಭೆಗೆ ಪ್ರವೇಶಾವಕಾಶ ದೊರೆಯಲಿಲ್ಲ. ಅರಸನು ರೋಷಕಷಾಯಿತನಾಗಿ ಕಂಪಿಸುತ್ತಿದ್ದ. ಅಪರಾಧಿಗಳನ್ನು ಕಂಡಮೇಲಂತೂ ಕೋಪ ದಳ್ಳುರಿಯಂತೆ ಅವನ ದೇಹದಿಂದ ಹೊರಬೀಳುತ್ತಿತ್ತು.

" ಈ ನಡತೆಗೇನು ಸಮಾಧಾನ ಮಧುವರಸರೇ."

" ಸಮಾಧಾನ ಏನು ಹೇಳಲಿ ಮಹಾಪ್ರಭೂ. ನನ್ನ ಮಗಳ ಹಿತಕ್ಕೆ ನಾನು ಶೀಲವಂತಯ್ಯನಿಗೆ ಅವಳನ್ನು ಧಾರೆಯೆರೆದೆ."

" ನಿಮ್ಮ ಮಗಳಿಗೆ ಹೊಲೆಯರ ಮಗನಲ್ಲದೆ ಬೇರೆ ವರನೆಲ್ಲಿಯೂ ದೊರೆಯುತ್ತಿರಲಿಲ್ಲವೇ ?"

" ದೊರೆಯುತ್ತಿದ್ದ."

" ಹಾಗಾದರೆ "

" ಶೀಲವಂತಯ್ಯ ದೊರೆಯುತ್ತಿರಲಿಲ್ಲ. ಮೂರ್ತಿವೆತ್ತ ಶೀಲವೇ ನನ್ನೆದುರಿಗಿದ್ದಾಗ ಬೇರೆ ವರನನ್ನು ನಾನು ಏತಕ್ಕೆ ಹುಡುಕಲಿ."

" ಹರಳಾ "

" ಮಹಾಸ್ವಾಮಿ "

"ಕೀಳುಜಾತಿಯ ಕುಲಾಧಮಾ....ಕುಲೀನರ ಮನೆಯ ಮಗುವನ್ನು ಮೋಸದಿಂದ ನೀನೂ ನಿನ್ನ ಮಗನೂ ಅಪಹರಿಸಿರುವ ಅಪರಾಧಕ್ಕೆ ಶಿಕ್ಷೆ ಏನು ಗೊತ್ತುಂಟೋ ? ನರಕಯಾತನೆ....ಮರಣ."

"ನಾವು ಅಪಹರಿಸಲಿಲ್ಲ ಪ್ರಭೂ. ವಧುವಿನ ಮಾತಾಪಿತರ ಒಪ್ಪಿಗೆ ಪಡೆದು ಶಾಸ್ತ್ರೋಕ್ತವಾಗಿ ಅಗ್ನಿಸಾಕ್ಷ್ಯವಾಗಿ ನಮ್ಮ ಮನೆಗೆ ಸ್ವೀಕರಿಸಿದೆವು."

"ಇದೆಲ್ಲಾ ಆ ಬಸವನ ಪ್ರೇರಣೆಯೆಂದು ಕಾಣುತ್ತದೆ. ತಾನು ಕುಲ ಕಳಂಕಿಯಾದುದು ಸಾಲದೆ ಇಡೀ ಕಲ್ಯಾಣವನ್ನು ವರ್ಣಸಾಂಕರ್ಯದ ಸೋಂಕಿನಲ್ಲಿ ಕೆಡಹಬೇಕೆಂದು ಅವನ ಹವಣಿಕೆ."

"ಪ್ರಭೂ ತಾವು ಹೀಗೆ ನುಡಿಯಬಾರದು. ಧರ್ಮವೀರ ಬಸವಣ್ಣ ನವರನ್ನು ನಿಂದಿಸಬಾರದು."

ಎಂದು ಶೀಲವಂತ ನುಡಿದ. ಅರಸನ ಕೋಪ ಮತ್ತೂ ಕೆರಳಿತು.

"ನಿಂದಿಸಬಾರದೋ ?" ಎಂದು ಹಲ್ಲುಮುಡಿ ಕಚ್ಚಿ ಸೈನಿಕರಿಗೆ ಸಂಜ್ಞೆಮಾಡಿದ.

"ಈ ನಾಲ್ಕು ನಾಯಿಗಳಿಗೂ ಚಿತ್ರಹಿಂಸೆ ಮಾಡಿ, ಕಣ್ಣು ಕಿತ್ತು ಕೈಗಿತ್ತು ವಧಿಸಿಬಿಡಿ....ಈಗ ನೋಡುವ....ನಿಮ್ಮ ಧರ್ಮಾಭಿಮಾನ ಎಷ್ಟು ಉಳಿದಿರುತ್ತೆಂಬುದನ್ನು."

ನಾಲ್ವರೂ ಒಬ್ಬರನ್ನೊಬ್ಬರು ನೋಡಿಕೊಂಡರು. ಎಲ್ಲರ ಕಣ್ಣು ಗಳಿಂದಲೂ ದುಃಖಾಶ್ರುಪ್ರವಾಹ ಹೊರಟಿತು. ಅರಸನು ಅದನ್ನು ನೋಡುತ್ತಾ ವಿಕಟಾಟ್ಟಹಾಸದಿಂದ ನಕ್ಕು

"ಸೈನಿಕರೇ ಅಷ್ಟೇ ಅಲ್ಲ. ಇವರಿಬ್ಬರ ವಂಶದ ಒಂದು ನರಪಿಳ್ಳೆ ಯನ್ನು ಸಹಾ ಬಿಡದೆ ಚಿತ್ರಹಿಂಸೆ ಮಾಡಿ ಸಂಹರಿಸಿಬಿಡಿ."

ಎಂದು ಆಜ್ಞಾಪಿಸಿ ಪರಿವಾರದೊಂದಿಗೆ ಹೊರಟುಹೋದ. ಮಧು ವರಸನ ಶೋಚನೀಯ ಸ್ಥಿತಿಯನ್ನು ಕಂಡು ಸೈನಿಕರೂ ಸಂತಾಪಗೊಂಡರು. ಆದರೆ ತಮ್ಮ ಗತಿಯನ್ನು ಯೋಚಿಸಿಕೊಂಡು ಯಾವ ಭಾವನೆಯನ್ನೂ ವ್ಯಕ್ತ ಗೊಳಿಸದೆ ಸುಮ್ಮನಿದ್ದರು. ದುಃಖದ ಭರದಲ್ಲಿ ಶೀಲವಂತ ತಂದೆಯನ್ನಪ್ಪಿದ. ಮಧುವರಸರು ಮಗಳ ಕಣ್ಣೊರಸಿ ತಲೆದಡವಿದರು.

"ನಮ್ಮ ತಪ್ಪಿಗೆ ನಿಮಗೆಲ್ಲಾ ಶಿಕ್ಷೆಯಾಯಿತಲ್ಲಾ ಅಪ್ಪಾಜಿ" ಎಂದು ನೀಲಾ ಬಿಕ್ಕುತ್ತ ಬಿಕ್ಕುತ್ತ ನುಡಿದಳು.

"ತಪ್ಪೇನು? ತಪ್ಪೆಲ್ಲಿಂದ ಬಂತು ಮಗಳೇ. ಮನಸ್ಸಿನ ನಂಬಿಕೆಯನ್ನು ಆಚರಿಸಲಾಗದ ವ್ಯಥೆಯಿಂದ ನರಳಿ ಸತ್ತಂತೆ ಬದುಕಿರುವುದಕ್ಕಿಂತಲೂ ಸಾಯುವುದೇ ಲೇಸಲ್ಲವೇ?"

ಹರಳಯ್ಯನವರು ಮಧುವರಸರನ್ನು ಆಲಂಗಿಸಿದರು. ಇಬ್ಬರೂ ನೀಲಾ ಶೀಲವಂತಯ್ಯರನ್ನು ಹರಸಿದರು. ಸೈನಿಕರು ವೇಳೆಯಾಯಿತೆಂದು ಅವಸರಪಡಿಸುತ್ತಾ ಅವರನ್ನು ಎಳೆದೊಯ್ದರು. ನೀಲಾ ಶೀಲವಂತನ ಅಪ್ಪಣೆ ಪಡೆದಳು. ಪ್ರಣಯಿಗಳು ತಮ್ಮ ಮೂಕವೇದನೆಯನ್ನು ಇಂಗಿತದಲ್ಲಿಯೇ ಸೂಚಿಸಿದರು. ಸೈನಿಕರು ಆ ಎಳೆಗರುಗಳ ವೇದನೆಯನ್ನು ನೋಡಲಾಗದೆ ಅತ್ತ ತಿರುಗಿದರು. ನೀಲಾ ದುಃಖದ ಭರದಲ್ಲಿ ಶೀಲವಂತಯ್ಯನನ್ನಪ್ಪಿದಳು. ಸೈನಿಕರು ವೇಳೆಯಾಯಿತೆಂದು ಎಚ್ಚರಿಸಿ ಇಬ್ಬರನ್ನೂ ಎಳೆದೊಯ್ದರು.

೫

ಬಸವಣ್ಣನವರು ಅಂದು ಮಹೇಶನ ಪೂಜೆಗೆ ಕುಳಿತಾಗ ಚಿತ್ತಸ್ವಾಸ್ಥ್ಯ ಸಂಪೂರ್ಣವಾಗಿ ಚಲಿಸಿಹೋಗಿತ್ತು. ಮನಸ್ಸನ್ನು ಯಾವದೋ ಚಿಂತೆ ಪೀಡಿಸುತ್ತಿತ್ತು. ಮುಂದೆ ಇಷ್ಟಲಿಂಗವನ್ನಿಟ್ಟುಕೊಂಡು ಅದಕ್ಕೆ ಕಣ್ಣೀರಿನ ಅಭಿಷೇಕ ಮಾಡುತ್ತಿದ್ದರು. ಕಂಠ ಗದ್ಗದವಾಗಿ ಮಾತುಗಳು ತಡೆತಡೆದು ಬರುತ್ತಿದ್ದವು.

"ಅಕಟಕಟ, ಶಿವ ನಿನಗಿಸಿತು ಕರುಣವಿಲ್ಲ
ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯು, ಪರಲೋಕ ದೂರನ?
ಏಕೆ ಹುಟ್ಟಿಸಿದೆ ಕೂಡಲ ಸಂಗಮದೇವ ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ"

ಎಂದು ಮೊರೆಯಿಡುವರು. ನಿಃಕಳಂಕನಾಗಿ ತದೇಕಧ್ಯಾನಚಿತ್ತನಾಗಿ ದಿವ್ಯ ಪೀಠದಲ್ಲಿ ಮಂಡಿಸಿದ್ದ ವಿರಾಗ ವಿರಾಜಮಾನ ಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತಾ—

"ನೀನೊಲಿದರೆ, ಕೊರಡು ಕೊನರುವುದಯ್ಯಾ !
ನೀನೊಲಿದರೆ ಬರಡು ಹಯನಹುದಯ್ಯಾ !
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ !
ನೀನೊಲಿದರೆ ಸಕಲ ಪಡಿ ಪದಾರ್ಥ ಇದರಲ್ಲಿಪ್ಪುವು,
ಕೂಡಲ ಸಂಗಮದೇವಾ !"

ಎಂದು ಸ್ತುತಿಸುವರು. ಬೆಳೆದ ತಮ್ಮ ಬಾಳು ಇನಿತು ದಿವಸವೂ ಶಿವನನ್ನು ಕಾಣದಾಯಿತಲ್ಲಾ ಎಂಬುದನ್ನು ಸ್ಮರಿಸಿಕೊಂಡು—

"ಅಯ್ಯಾ ! ಅಯ್ಯಾ ! ಎಂದು ಕರೆವುತಲಿದ್ದೇನೆ
ಅಯ್ಯಾ ! ಅಯ್ಯಾ ! ಎಂದು ಒರಲುತ್ತಲಿದ್ದೇನೆ
ಓ ಎನ್ನಲಾಗದೆ ಅಯ್ಯಾ! ಆವಾಗಳೂ ನಿಮ್ಮನ್ನು ಕರೆವುತ್ತಲಿದ್ದೇನೆ
ಓ ಎನ್ನದೆ ಮೌನವೇ ಕೂಡಲ ಸಂಗಮದೇವಾ ?"

ಎಂದು ಆರ್ತರಾಗಿ ಹಂಬಲಿಸುವರು. ಗರಗಸದಂತೆ ಹೋಗುತ್ತ ಬರುತ್ತ ಕುಯ್ಯುತ್ತಲಿದ್ದ ಭಕ್ತಿಯ ಜೇನೆಯಲ್ಲಿ ನೋಯುತ್ತ ಪೂಜಾವಿಧಿಗಳನ್ನೂ ಮರೆತು ಅಣ್ಣನವರು ತಲ್ಲೀನರಾಗಿರಲು ಆಳುಮಗನು ಬಂದು ಕೈಮುಗಿದು ನಿಂತ. ಕೆಲಹೊತ್ತು ಅಣ್ಣನವರ ದೃಷ್ಟಿ ಅವನ ಮೇಲೆ ಬೀಳಲೇ ಇಲ್ಲ. ಅವನೇ ಎಚ್ಚರಿಸಲು ಕಣ್ತೆರೆದು ನೋಡಿದರು. ಆಳುಮಗನ ಮುಖವು ಕಂಬನಿಯಿಂದ ನೆನೆದು ಹೋಗಿತ್ತು. ಅಣ್ಣನವರು ಅವನನ್ನು ನೋಡಿ ಕಾರಣವನ್ನು ಕೇಳಿದರು. ಅವನು ಬಿಕ್ಕುತ್ತ ಬಿಕ್ಕುತ್ತ ಅಣ್ಣನವರನ್ನೇ ನೋಡುತ್ತ ನಿಂತ.

"ಏಕೆ ಅಳುತ್ತಿರುವೆ. ಹೇಳು ಏನಾಯಿತು !"

"ಏನೆಂದು ಹೇಳಲಿ ಪ್ರಭುವೇ....ಬಹಳ ಕೆಟ್ಟ ಸುದ್ದಿ...."

"ಹೇಳು....ದುಃಖಿಸಬೇಡ ಹೇಳು."

"ಮಧುವರಸರು....ಹರಳಯ್ಯನವರು...."

"ಹೂ ! ಹೂ ! ಏನಾಯಿತು."

"ಮತ್ತು ಆವರ ಮಗ....ಮಗಳು."

"ಏನಾಯಿತು....ಬೇಗ ಹೇಳು."

"ಎಲ್ಲರನ್ನೂ ಮಹಾರಾಜರು ಚಿತ್ರಹಿಂಸೆ ಮಾಡಿಸಿ ಕೊಲ್ಲಿಸಿದರು."

"ಕೊಲ್ಲಿಸಿದರೇ....ಏನು ಕಾರಣ?"

"ಹೊಲೆಯನ ಮಗ ಹಾರವನ ಮಗಳನ್ನು ಮದುವೆಯಾದದ್ದೇ ಕಾರಣವಂತೆ."

"ಹಾ! ಶಿವಶಿವಾ!"

ಎಂದುದೇ ಅಣ್ಣನವರು ಮೂರ್ಛೆಗೊಂಡರು. ಆಳುಮಗ ಭೀತಿಗೊಂಡು ಅಣ್ಣನವರ ಮನೆಯವರಿಗೆ ಸುದ್ದಿ ಕೊಟ್ಟ. ಉಪಚರಿಸಿ ಅಣ್ಣನವರನ್ನು ಪಲ್ಲಂಕದ ಮೇಲೆ ಮಲಗಿಸಿದರು. ಸ್ವಲ್ಪ ಹೊತ್ತಾಗಲು ಜ್ಞಾನ ಬಂದಿತು. ಅಣ್ಣನವರ ಕಣ್ಣುಗಳಲ್ಲಿ ಧಾರೆಧಾರೆಯಾಗಿ ಪ್ರವಾಹ ಹೊರ ಹೊಮ್ಮಿತು. ಉದ್ವೇಗದಿಂದ ಎದೆ ಉಬ್ಬರವಿಳಿತ ತಾಳುತ್ತಿತ್ತು. ಮನಸ್ಸಿನಲ್ಲಿ ಸಮುದ್ರದ ತೆರೆಯಂತೆ ಉಕ್ಕುತ್ತಿದ್ದ ಶೋಕದ ಹೊಡೆತವನ್ನು ಸಹಿಸಿಕೊಂಡು ಜಗದ್ಕರ್ತನನ್ನು ನೋಡಿ

"ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು
ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು
ಯದ್ಭಾವಂ ತದ್ಭವತಿ
ಉರಿಬರಲಿ, ಸಿರಿಬರಲಿ ಬೇಕುಬೇಡೆನ್ನೆನು
ಆನು ನಿಮ್ಮ ಹಾರೆನು, ಮಾನವರ ಬೇಡೆನು
ಆಣೆ ನಿಮ್ಮಾಣೆ ಕೂಡಲ ಸಂಗಮದೇವ"

ಎಂದು ನುಡಿದರು. ತಕ್ಷಣವೇ ಮನಸ್ಸಿಗೆ ಏನೋ ಹೊಳೆದಂತಾಯಿತು. ಶೋಕದ ಕಡಲು ತಾನಾಗಿಯೇ ಕುಂದುತ್ತ ಬಂದಿತು. ಬಳಲಿದ್ದ ಮೊಗದ ಮೇಲೆ ತಂಗಾಳಿ ಬೀಸಿದಂತಾಯಿತು.

"ನಾಳೆ ಬಪ್ಪುದು ನಮಗಿಂದೇ ಬರಲಿ
ಇಂದು ಬಪ್ಪುದು ನಮಗೀಗಲೇ ಬರಲಿ
ಇದಕಾರಂಜುವರು? ಇದಕಾರಳಕುವರು?
'ಜಾತಸ್ಯ ಮರಣಂ ಧ್ರುವಂ' ಎಂಬುದಾಗಿ
ನಮ್ಮ ಕೂಡಲ ಸಂಗಮದೇವ ಬರೆದ ಬರೆಹವ ತಪ್ಪಿಸುವರೆ
ಹರಿಬ್ರಹ್ಮಾದಿಗಳಳವಲ್ಲ"

ಎಂದು ಸಮಾಧಾನಗೊಂಡರು. ಅಣ್ಣನವರ ಮೊಗದಲ್ಲಿ ಸಾತ್ವಿಕ ಕಳೆಯ ಬೆಳ್ಳಿಯ ಬೆಳಕು ಮೂಡಿತು. ಕಣ್ಣುಗಳಲ್ಲಿ ದುಃಖದ ಬದಲು ಶಾಂತಿ ಸ್ಥಾಪಿತವಾಯಿತು.

"ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ!
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ!
ಜಗಕ್ಕೆ ಬಲ್ಲಿದ ನೀನು ಆನು ನಿನಗೆ ಬಲ್ಲಿದನು
ಕಂಡಯ್ಯಾ! ಕರಿಯು ಕನ್ನಡಿಯೊಳಗಡಗಿದಂತಯ್ಯ
ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವಾ"

ಎಂದು ನುಡಿದೆದ್ದರು. ತಮ್ಮ ಪರಿವಾರವನ್ನುದ್ದೇಶಿಸಿ.

"ಒಡೆಯನ ಆಣತಿ ಬಂದಿದೆ ಇಂದೇ ಕಪ್ಪಡಿ ಸಂಗಮಕ್ಕೆ ಬಾರೆಂದು. ಮಾಯಾಪಾಶದ ಬಂಧನವ ಕಡಿದೊಗೆಯೆಂದು. ಜತೆಗೂಡುವವರು ಕೂಡಿ ಬನ್ನಿ." ಎಂದು ತಮ್ಮ ಮುಂದಿನ ಕರ್ತವ್ಯದ ಹಾದಿಯನ್ನು ಸೂಚಿಸಿ ಬಿಟ್ಟರು.

× × × ×

ಕಲ್ಯಾಣದ ಭಾಸ್ಕರ ಅಂದೇ ಅಸ್ತಂಗತನಾದ. ತಾನು ಅಸ್ತಂಗತ ನಾಗುವುದಕ್ಕೆ ಮುಂಚೆ ಆ ಮಹಾ ರಾಜಧಾನಿಯ ಭವಿಷ್ಯತ್ತನ್ನು ಸೂಚಿಸು ವಂತೆ ಕೆಂಗಣ್ಣಿನಿಂದ ದುರದುರನೆ ನೋಡಿ ಹೋದ. ಪ್ರಕೃತಿ ತನ್ನ ಅಂತಸ್ತಾಪವನ್ನು ಮೂಕ ಬಗೆಯಲ್ಲಿ ಸೂಚಿಸುವಂತೆ ಕಣ್ಣೀರಿನ ಧಾರೆ ಸುರಿಸಿತು. ಕಲ್ಯಾಣವು ಅಣ್ಣನವರು ಹೋದ ದಾರಿಯನ್ನೇ ಆರ್ತತೆಯಿಂದ ನಿರೀಕ್ಷಿಸುತ್ತ ನಿಂತಿತು. 'ಮತ್ತೆ ಬರುವರೇ' ಎಂದು ಪ್ರಶ್ನೆ ಕೇಳುವುದು. ಪ್ರಕೃತಿಯೂ ದನಿಗೂಡಿಸಿ 'ಮತ್ತೆ ಬರುವರೇ' ಎನ್ನುವುದು.

ಆದರೆ "ಬರುವವರು—ಖಂಡಿತವಾಗಿಯೂ ಬರುವರು" ಎಂದೆನ್ನುವ ಧೈರ್ಯ ಯಾರಲ್ಲಿಯೂ ಹುಟ್ಟದು. ಆಶೆಯ ಆಶ್ರಯದಲ್ಲಿ ಹೃದಯದ ಹಿರಿ ನೋವನ್ನು ದೂರಮಾಡುವುದು ಯಾರಿಂದಲೂ ಆಗದು.

# ಜೀವನದ ಕರೆ

## ಕುತ್ ಹಮ್ಸುನ್

ಕುತ್ ಹಮ್ಸುನನು ೧೮೫೯ ನೆಯ ಇಸವಿಯಲ್ಲಿ ಗುಡ್‌ಬ್ರ್ಯಾಂಡ್ಸಡೇಲನ್‌ನಲ್ಲಿ ಹುಟ್ಟಿ ಬಾಲ್ಯದ ದಿನಗಳನ್ನು ನಾರ್ಡ್‌ಲ್ಯಾಂಡಿನಲ್ಲಿ ಕಳೆದ. ಅವನಿಗೆ ಸಾಂಪ್ರದಾಯಿಕ ಶಾಲಾ ಶಿಕ್ಷಣ ಯಾವುದೂ ಆಗಲಿಲ್ಲ. ಆದರೆ ತುರುವಳ (Herdsman) ನಾಗಿ ತರುವಾಯದ ತನ್ನ ಸಾಹಿತ್ಯ ಸೃಷ್ಟಿಗಳಲ್ಲಿ ಮೂರ್ತಿತ್ವವನ್ನು ಪಡೆಯುವಂತಹ ಕಣಸುಗಳನ್ನು, ಸುಂದರವಾದ ನಿಸರ್ಗ ಶೋಭೆ ಹಾಗೂ ವಾತಾವರಣದ ಬಗ್ಗೆ ಕಾಣುತ್ತಿದ್ದ. ಅಂದರೆ ಶಾಲೆ, ಗ್ರಂಥಗಳ ಬದಲು ನಿಸರ್ಗ ಅವನ ಶಿಕ್ಷಣಮಂದಿರವಾಗಿದ್ದಿತು. ಯುನೈಟೆಡ್ ಸ್ಟೇಟ್ಸ್‌ನಲ್ಲಿ (ಅಮೇರಿಕಾದೇಶ) ಹಣ ಸಂಪಾದಿಸಲು ವೃಥಾ ಶ್ರಮಪಟ್ಟು ಕೊನೆಗೆ ನಾರ್ವೆಗೆ ಬಂದ. ಓಸ್ಲೋ ಪಟ್ಟಣದಲ್ಲಿ, ಉದ್ಯೋಗವನ್ನು ಹುಡುಕುತ್ತಾ ನಿಷ್ಫಲನಾಗಿ ದಾರಿದ್ರ್ಯದುರಿಯಲ್ಲಿ "ಹಂಗರ್" (Hunger–೧೮೯೦) ಎಂಬ ಅಮೋಘ ಗ್ರಂಥವನ್ನು ಬರೆದ. ಈ ಗ್ರಂಥದ ಯೋಗ್ಯತೆ ತಕ್ಷಣವೇ ಸ್ಕಾಂಡಿನೇವಿಯನ್ ದೇಶಗಳಲ್ಲೆಲ್ಲಾ ಹರಡಿ ಬರೆಹಗಾರನಿಗೆ ವಿಶೇಷ ಖ್ಯಾತಿಯನ್ನು ತಂದಿತು. ಈ ಗ್ರಂಥದಲ್ಲಿಯೂ "ಮಿಸ್ಟರೀಸ್" ಮತ್ತು "ಪಾನ್" (Mysteries and pan) ಎಂಬ ನವನ್ಯಾಸಗಳಲ್ಲಿಯೂ, "ವಿಕ್ಟೋರಿಯಾ" (Victoria) ಎಂಬ ಪ್ರೇಮಕವನದಲ್ಲಿಯೂ, "ಮಂಕನ್ ವೆಂಡ್" (Munken Vendt) ಎಂಬ ನಾಟಕ ಕವನದಲ್ಲಿಯೂ, ಮನೋರಂಜಕನೂ, ಸ್ವೇಚ್ಛಾಗಾಮಿಯಾದರೂ ಉದಾರ ಹೃದಯನೂ ಅಹಂಭಾವಿಯೂ, ಸಮಾಜ ರಚನೆಯಿಂದ ಹೊರವುಳಿದವನೂ ಆದ ನಾಯಕ ಚಿತ್ರಿಸಲ್ಪಟ್ಟಿದ್ದಾನೆ. ಈ ನಾಯಕನೇ "ವಾಂಡರರ್ಸ್" (Wanderers) ಮತ್ತು "ಲಾಸ್ಟ್ ಜಾಯ್" (Lost Joy) ಎಂಬ ಗ್ರಂಥಗಳಲ್ಲಿ ಜೀವನದ ಅಭಿನಯಕಾರನಂತಲ್ಲ, ದೂರ ನಿಂತು ನೋಡುವ ನೋಟಕನಂತೆ ಬರುತ್ತಾನೆ. "ಬಿನೋನಿ" "ರೋಸಾ" ಮತ್ತು "ಸೆಗಲ್‌ಫಾಸ್ ಟೌನ್" (Benoni, Rosa, and Segelfoss Town) ಎಂಬ ಕಾದಂಬರಿಗಳು ವ್ಯಕ್ತಿಗಳ ಜೀವನಕಥೆಗಳಾಗಿರದೆ ಸಮಾಜಗಳ ಬೃಹದ್ ಚಿತ್ರಗಳಾಗಿವೆ. ಇವುಗಳಲ್ಲಿ ಹಮ್ಸುನ್ನನ ನಗೆಗೂ, ಮತ್ತು ವಿವೇಚಕ ವಿವರಣೆಗಳಿಗೂ ಹೆಚ್ಚು ಆಸ್ಪದ ದೊರೆತಿದೆ. ಹಮ್ಸುನ್ನನ ಸೃಷ್ಟಿಕ್ರಿಯೆಯ ಶಿಖರವೆಂದು ಖ್ಯಾತಿಗೊಂಡಿರುವ "ಗ್ರೋತ್ ಆಫ್ ದಿ ಸಾಯಿಲ್" ಯಲ್ಲಿ ಯುವನು ಅನಾಗರಿಕ ಪೂರ್ವಪುರುಷನನ್ನು ಸ್ನೇಹಮಯವಾದ, ಅಂದಗೆಡದಿರುವ ನಿಸರ್ಗದ ಮಧ್ಯದಲ್ಲಿ ಅಲಂಕರಿಸುತ್ತಾನೆ. ಅದು ಯುದ್ಧಕಾಲದಲ್ಲಿ ಬಂದುದರಿಂದಲೂ,

ರಚನಾತ್ಮಕ ಶಕ್ತಿಯು ಪರಮಾವಧಿಯನ್ನೇ ತೋರುತ್ತಿದ್ದುದರಿಂದಲೂ ಜಗತ್ತಿನ ಎಲ್ಲಾ ಭಾಗದಿಂದಲೂ ಮೆಚ್ಚುಗೆ ದೊರಕಿತು. ಹಮ್ಸುನ್ನನ ಸಾಹಿತ್ಯ ಸೇವೆಗೆ ಯುಕ್ತ ಮನ್ನಣಾಪೂರ್ವಕವಾಗಿ ನೋಬಲ್ ಪಾರಿತೋಷಕವೂ ದೊರಕಿತು.

ಹಮ್ಸುನ್ ಸಾಹಿತ್ಯ ಸೇವೆಯೆಲ್ಲಾ ಮುಕ್ಕಾಲು ಪಾಲು ಕಲ್ಪನಾ ಕಥಾರಚನೆಯಲ್ಲಿಯೇ ನಡೆದಿದೆ. ಇದಲ್ಲದೆ ಆತನು ಹಲವು ಪದ್ಯಗಳನ್ನೂ "ದಿ ವೈಲ್ಡ್ ಕೋರಸ್" (The wild chorus) ಎಂಬ ಕಾವ್ಯವನ್ನೂ ಬರೆದಿದ್ದಾನೆ.

---

ಕೋಪನ್ ಹೇಗನ್ನಿನಲ್ಲಿ, ಹೊಸದಾದರೂ ನಿರ್ಜನವಾದ ವೆಸ್ಟರ್ ಪ್ರೋಲ್ಡ್ ಎಂಬ ಬೀದಿ ಇದೆ. ಅಲ್ಲಿ, ಕೆಲವು ಮನೆಗಳು ಮಾತ್ರವಿವೆ. ಅಲ್ಲಿ ಇಲ್ಲಿಯೊಂದೊಂದು ಮಾತ್ರ ದೀಪಗಳು; ಜನಸಂಚಣಿಯಂತೂ ಇಲ್ಲವೇ ಇಲ್ಲ ವೆನ್ನಬಹುದು. ಅಲ್ಲಿ ಕಳೆದ ರಾತ್ರಿ ನನಗೊಂದು ಆಶ್ಚರ್ಯವುಂಟಾಯಿತು.

ಬೀದಿಯ ಪಕ್ಕದಲ್ಲಿಯೇ ನಡೆದು ಸ್ವಲ್ಪ ದೂರ ನಾನು ಹೋಗಿದ್ದೇನೆ ಆಗೊಬ್ಬ ಆಗಂತುಕಳು ನನ್ನೆದುರಾಗಿ ಬಂದಳು. ಬೀದಿಯಲ್ಲಿ ಜನರು ಯಾರೂ ತಿರುಗಾಡುತ್ತಿರಲಿಲ್ಲ. ಲಾಂದ್ರಗಳು ಹಚ್ಚಲ್ಪಟ್ಟಿದ್ದರೂ, ಕತ್ತಲೆ ತುಂಬಿದ್ದಿತು. ಆಕೆಯ ಮುಖ ಕೂಡ ನನಗೆ ಚೆನ್ನಾಗಿ ಕಾಣಬರುತ್ತಿರಲಿಲ್ಲ. ಯಥಾವಿಧಿಯ ನಿಶಾಚರರಲ್ಲಿ ಅವಳೂ ಒಬ್ಬಳೆಂದು ಭಾವಿಸಿ ನಾನು ಮುಂದು ವರಿದೆ.

ಚೌಕದ ಬಳಿಗೆ ಬಂದಾಗ ಬಲಕ್ಕೆ ತಿರುಗಿದೆ, ಆಗಲ್ಲಿ ಪುನಃ ಆಕೆಯನ್ನೇ ಸಂಧಿಸಿದೆ. ಆಕೆಯು ಯಾರಿಗೋ ಕಾಯುತ್ತಿದ್ದಂತಿತ್ತು; ಯಾರಿಗಾಗಿ ಎಂಬುದನ್ನು ತಿಳಿಯುವುದರ ಕುತೂಹಲ ನನ್ನಲ್ಲಿಯುಂಟಾಯಿತು. ಆದರೂ ಮುಂದುವರಿದೆ. ಪುನಃ ಮೂರನೆಯಾವರ್ತಿ ಸಂಧಿಸಿದಾಗ ಟೊಪ್ಪಿಗೆಯನ್ನು ಎತ್ತಿ ಆಕೆಯೊಂದಿಗೆ ಮಾತನ್ನಾರಂಭಿಸಿದೆ.

'ಗುಡ್ ಈವನಿಂಗ್, ಯಾರಿಗಾದರೂ ಕಾಯುತ್ತಿರುವಿರೋ ?'

ಆಕೆಯು ಚಕಿತಳಾದಳು. ಹೌದು—ಯಾರಿಗೋ ಕಾಯುತ್ತಿದ್ದಳು. ಅದು ನಿಜ. ಆಕೆಯು ಯಾರಿಗೆ ಕಾಯುತ್ತಿದ್ದಳೋ ಆತ ಬರುವ ತನಕ ನಾನು ಜೊತೆಯಲ್ಲಿರಲು ಅಭ್ಯಂತರವುಂಟೇನು ?

ಇಲ್ಲ — ಆಕೆಯು ಅಭ್ಯಂತರಪಡಿಸದೆ ನನ್ನನ್ನು ವಂದಿಸಿದಳು.

ಸಾಲದುದಕ್ಕೆ ಯಾರಿಗೂ ತಾನು ಕಾಯುತ್ತಿಲ್ಲವೆಂದೂ ಕೇವಲ ವಾಯು ಸೇವನೆಗಾಗಿ ಅತ್ತಿತ್ತ ತಿರುಗಾಡುತ್ತಿರುವೆನೆಂದೂ ಹೇಳಿದಳು.

ನಾವಿಬ್ಬರೂ ಜೊತೆಯಲ್ಲಿಯೇ ಸ್ವಲ್ಪ ಹೊತ್ತು ಸುತ್ತಾಡಿದೆವು. ಸಿಕ್ಕಿದ ವಿಚಾರಗಳನ್ನೆಲ್ಲಾ ಸಂಭಾಷಿಸಿದೆವು. ನನ್ನ ತೋಳನ್ನು ನೀಡಿದೆ. 'ಥ್ಯಾಂಕ್ಯೂ' ಎಂದಳು.

ಹೀಗೆ ರಾತ್ರಿಯಲ್ಲಿ ಸುತ್ತಾಡುವುದರಲ್ಲಿ ನನಗೇನೂ ಸುಖ ಕಂಡು ಬರಲಿಲ್ಲ. ಅವಳ ಮುಖ ಕೂಡ ಕತ್ತಲೆಯಿಂದ ಕಾಣುತ್ತಿರಲಿಲ್ಲ. ಗಂಟೆ ನೋಡೋಣವೆಂದು ಕಡ್ಡಿ ಗೀರಿದೆ. ಹಾಗೆಯೇ ಅವಳ ಕಡೆಗೂ ತಿರುಗಿಸಿ ನೋಡಿದೆ.

೯–೩೦

ಚಳಿಯಿಂದವಳು ವಿಶೇಷ ನಡುಗುತ್ತಿದ್ದಳು. ಆ ಸಮಯವನ್ನೇ ಹಿಡಿದು 'ನೀನು ನಡುಗುತ್ತಿದ್ದಿ, ಎಲ್ಲಿಯಾದರೂ ಹೋಗಿ, ಕುಡಿಯಲಿಕ್ಕೆ ಏನನ್ನಾದರೂ ತೆಗೆದುಕೊಳ್ಳುವಾ.'

'ಆದರೆ ನಾನೀಗ ಎಲ್ಲಿಗೂ ಹೋಗಲು ಸಾಧ್ಯವಿಲ್ಲವೆಂಬುದನ್ನು ನೀನು ಕಾಣುವುದಿಲ್ಲವೇ ?'

ಆಗ ನಾನು, ಆಕೆಯು ಮುಖಕ್ಕೊಂದು ಉದ್ದನೆಯ ಕಪ್ಪು ತೆರೆಯನ್ನು ಧರಿಸಿದ್ದುದನ್ನು ಕಂಡೆ. ತಪ್ಪಿಗೆ ನಿಶಿಯನ್ನು ಬಯ್ದು ಕ್ಷಮೆ ಬೇಡಿದೆನು. ಆಕೆ ನನ್ನ ಕ್ಷಮೆಯನ್ನು ಸ್ವೀಕರಿಸಿದ ರೀತಿಯಲ್ಲಿಯೇ, ಯಥಾವಿಧಿಯ ನಿಶಾಚರರಲ್ಲಿಯೊಬ್ಬಳಲ್ಲವೆಂಬುದು ನನಗೆ ದೃಢಪಟ್ಟಿತು.

'ನನ್ನ ತೋಳನ್ನು ಹಿಡಿದುಕೊಳ್ಳಬಾರದೇನು, ಸ್ವಲ್ಪ ಬೆಚ್ಚಗಾಗ ಬಹುದು' ಎಂದು ನಾನು ಸೂಚಿಸಿದೆ.

ಹಾಗೆಯೇ ಮಾಡಿದಳು.

ತಿರುಗಿ ಮೇಲಕ್ಕೆ ಕೆಳಕ್ಕೆ ಸ್ವಲ್ಪ ಹೊತ್ತು ಅಡ್ಡಾಡಿದೆವು. ಆಕೆ ಗಂಟೆಯೆಷ್ಟೆಂದು ಕೇಳಿದಳು.

'ಹತ್ತು. ನೀನು ವಾಸಿಸುವುದೆಲ್ಲಿ ?'

‘ಗಾವ್ಲಿ ಕಾಂಗೋಪಿ’ನಲ್ಲಿ.

ನಾನಾಕೆಯನ್ನು ನಿಲ್ಲಿಸಿ ‘ಮನೆಗೆ ಬಿಟ್ಟು ಬರಲೆ’ ಎಂದೆ.

‘ಬೇಡ ಬೇಡ, ನಾನೊಪ್ಪೆನು—ನೀನು ಪ್ರಿಡ್‌ಗೇಡ್‌ನಲ್ಲಿಯಲ್ಲವೆ ವಾಸಿಸುವುದು.’

‘ಹೌದು; ಆದರೆ ನಿನಗೆ ಹೇಗೆ ಗೊತ್ತು?’

‘ಓಹೊ! ನನಗೆ ನೀನು ಯಾರೆಂಬುದೂ ಗೊತ್ತು’ ಎಂದಳು.

ಸ್ವಲ್ಪ ಹೊತ್ತು ನೀರವ. ಇಬ್ಬರೂ ಪುನಃ ನಡೆಯಲಾರಂಭಿಸಿದೆವು. ಅವಳು ಬೇಗ ಬೇಗ ನಡೆಯುತ್ತಾ ‘ಹೆಜ್ಜೆಯನ್ನು ಹೆಚ್ಚಿಸುವುದೊಳ್ಳಿತು’ ಎಂದಳು.

ಅವಳ ಮನೆಯ ಬಾಗಿಲಿಗೆ ಬಂದೆವು. ಅವಳು ನನ್ನ ದಯೆಗೆ ಕೃತಜ್ಞತೆ [illegible]ನಂತೆ ನನ್ನ ಕಡೆ ತಿರುಗಿದಳು. ಬಾಗಿಲು ತೆಗೆದು, ಒಳಕ್ಕೆ ಪ್ರವೇಶಿಸಿದಳು. ಮೆಲ್ಲಗೆ ನಾನೂ ಒಳಹೊಕ್ಕೆ. ಒಳಗೆ ಹೋದೊಡನೆಯೇ ನನ್ನ ಕೈಗಳನ್ನು ಹಿಡಿದಳು. ಇಬ್ಬರೂ ಮಾತನಾಡದೆ ಸುಮ್ಮನಿದ್ದೆವು.

ಮಹಡಿಯನ್ನು ಹತ್ತಿದೆವು. ಅಲ್ಲಿಯೊಂದು ಕೋಣೆಯನ್ನು ತನ್ನ ಕೀಲಿಯಿಂದ ತೆರೆದು ಕೈ ಹಿಡಿದು ಒಳಕ್ಕೆ ನನ್ನನ್ನು ಕರೆದೊಯ್ದಳು. ಅದು ಡ್ರಾಯಿಂಗ್ ರೂಮಿರಬಹುದು. ಗೋಡೆಯ ಮೇಲೊಂದು ಗಡಿಯಾರ ಟಿಕ್‌ಟಿಕ್ ಎನ್ನುತ್ತಿತ್ತು. ಒಳಗೆ ಹೋದೊಡನೆಯೇ ಆಕೆಯು ಕ್ಷಣ ಕಾಲ ಸುಮ್ಮನಿದ್ದು, ಅನಂತರ ನನ್ನನ್ನಪ್ಪಿ, ಉದ್ವೇಗದಿಂದ ಚುಂಬಿಸಿದಳು. ಅದೂ ಅಧರದ ಮೇಲೆ.

‘ಕುಳಿತುಕೊಳ್ಳಬಾರದೇ, ಸೋಫಾಯಿದೆ. ಬೆಳಕು ಹಚ್ಚಿಸುವೆ’ ಎಂದು ದೀಪ ಹಚ್ಚಿದಳು.

ಸುತ್ತಲೂ ಅಚ್ಚರಿ ಆಸಕ್ತಿಗಳಿಂದ ನೋಡಿದೆ. ನಾನಿದ್ದುದು ಒಂದು ಡ್ರಾಯಿಂಗ್ ರೂಮಿನಲ್ಲಿ, ಅದರಿಂದ ಅರೆ ಬಾಗಿಲು ತೆರೆದಿದ್ದ ಕೆಲವು ಕೊಠಡಿಗಳು ಕಾಣುತ್ತಿದ್ದವು. ನಾನು ಸಂಧಿಸಿದುದೆಂತಹವಳನ್ನು ಎಂಬ ತೊಡಕು ಬಿಡಿಸುವುದು ಬಹು ಕಷ್ಟವಾಯಿತು.

‘ಎಂತಹ ಸುಂದರವಾದ ಕೋಣೆ, ನೀನಿಲ್ಲಿ ವಾಸಿಸುವೆಯಾ?’

‘ಹೌದು, ಇದೇ ನನ್ನ ಮನೆ.’

'ಇದೇ ನಿನ್ನ ಮನೆಯೋ—ಹಾಗಾದರೆ ನೀನು ತಾಯ್ತಂದೆಗಳೊಂದಿಗಿರುವೆ.'

'ಓ! ಓ!' ಎಂದು ನಕ್ಕು 'ನಾನು ವಯಸ್ಕಳು. ನೀನಂದುಕೊಂಡಿರುವಂತೆ ಮುಗ್ಧೆಯಲ್ಲ ನೀನೇ ನೋಡುವಿಯಂತೆ' ಎಂದು ಮುಖದ ತೆರೆಯನ್ನು ತೆರೆದಳು.

'ನೋಡಿದೆಯಾ; ನಾನು ಹೇಳಲಿಲ್ಲವೇ' ಎಂದನ್ನುತ್ತಾ ತನ್ನ ತೋಳ್ಗಳಿಂದ ನನ್ನನ್ನು ಒಂದು ತೆರದ ಉನ್ಮಾದದಿಂದ ಅಪ್ಪಿ ಹಿಡಿದಳು.

ಆಕೆಯ ವಯಸ್ಸು ೨೨–೨೩ ಇರಬಹುದು. ಬಲಗೈಯಲ್ಲಿಯೊಂದು ಉಂಗುರವಿದ್ದಿತು. ಮದುವೆಯಾಗಿದ್ದರೂ ಆಗಿರಬಹುದು; ಅವಳಲ್ಲಿ ಒಂದು ಬಗೆಯ ಲಾವಣ್ಯ, ನವಜೀವನಪ್ರಭೆ ಇದ್ದವು. ಮತ್ತು ಬಾಯಿಯಂತೂ ಅಪೂರ್ವ ಸೌಂದರ್ಯ ನಿಧಿ.

'ನೀನು ಯಾರು, ಗಂಡಯೆಲ್ಲಿರುವನು—ಮದುವೆಯಾಗಿದ್ದಲ್ಲಿ ನಾನೀಗಿರುವುದು ಯಾರ ಮನೆಯಲ್ಲಿ' ಎಂಬ ಪ್ರಶ್ನೆಗಳನ್ನು ಕೇಳಬೇಕೆಂದು ನಾನು ಪ್ರಯತ್ನಿಸುವುದಕ್ಕೇ ಅವಕಾಶ ಕೊಡದೆ ಬಾಯಿ ಮುಚ್ಚುತ್ತಿದ್ದಳು.

'ನನ್ನ ಹೆಸರು ಎಲನ್.—ಕುಡಿಯಲಿಕ್ಕೇನಾದರೂ ಬೇಕೇನು—ಒಳಕ್ಕೆ ಮಲಗುವ ಕೋಣೆಗೆ ನಡೆ, ಬರುವೆ' ಎಂದಳು.

ನಾನು ಮಲಗುವ ಕೋಣೆಯೊಳಗೆ ಹೋದೆ. ಡ್ರಾಯಿಂಗ್ ಕೋಣೆಯ ದೀಪ ಅದನ್ನು ಅರೆಬೆಳಗಿಸಿತ್ತು. ಅಲ್ಲಿ ಎರಡು ಹಾಸಿಗೆಗಳು. ಸ್ವಲ್ಪ ಹೊತ್ತಿನ ಮೇಲೆ ಎಲನಳು ಬಂದು ಬಾಗಿಲಿನಲ್ಲಿಯೇ ನಿಂತಳು. ನಾನೆದ್ದು ಅವಳ ಬಳಿಗೆ ಹೋದೆ. ಸಣ್ಣಗವಳು ಚೀರಿ ನನ್ನ ಬಳಿಗೆ ಬಂದಳು.

ಇದು ಕಳೆದ ರಾತ್ರಿ ನಡೆದುದು.

ಮುಂದೇನಾಯಿತು?

ತಾಳಿರಿ—ಇನ್ನೂ ಹೇಳಬೇಕಾದದ್ದು ಬೇಕಾದಷ್ಟಿದೆ.

× × × ×

ಇಂದಿನ ಬೆಳಗ್ಗೆ ನಾನೇಳುವಾಗ ಬೆಳಕು ಹರಿಯುತ್ತಿತ್ತು. ಫರದೆಯ ಎರಡು ಕಡೆಗಳಿಂದಲೂ ಪ್ರಾತಃಬೆಳಕು ಅಂಬೆಗಾಲಿಕ್ಕುತ್ತ ಬರುತ್ತಿತ್ತು.

ಎಲೆನ್ನಳು ಎಚ್ಚರಗೊಂಡಿದ್ದು, ನನ್ನ ಕಡೆ ತಿರುಗಿ ಮುಗುಳ್ನಗೆ ನಕ್ಕಳು. ಆವಳ ನಳಿತೋಳ್ಗಳು ಶ್ವೇತವರ್ಣದಿಂದ ಕೂಡಿ ಮೃದುವಾಗಿದ್ದವು. ವಕ್ಷ ಸ್ಥಳವು ಉನ್ನತವಾಗಿದ್ದಿತು. ನಾನೇನೋ ಪಿಸುಗುಟ್ಟಿದೆ, ಅವಳು ಮೆಲ್ಲನೆ ನನ್ನ ಬಾಯನ್ನು ತನ್ನದರದಿಂದ ಮಮತಾಪೂರ್ವಕವಾಗಿ ಮುಚ್ಚಿದಳು. ದಿನ ಹೆಚ್ಚು ಹೆಚ್ಚು ಬೆಳಕು ಕಾಣಿಸುತ್ತ ಬಂದಿತು.

× × × ×

ಎರಡು ಗಂಟೆಯ ಮೇಲೆ ಎದ್ದು ನಿಂತೆ. ಎಲೆನ್ನಳೆದ್ದು, ವಸ್ತ್ರ ಭೂಷಿತ ಳಾಗುತ್ತಿದ್ದಳು. ಕಾಲಿನಲ್ಲಿ ಮೋಜ ಧರಿಸಿದಳು. ಭಯಂಕರ ಸ್ವಪ್ನ ದಂತೆ ಈಗ ತೋರುವ ವಿಚಾರವೊಂದನ್ನು ಆಗ ನಾನು ಅನುಭವಿಸಿದೆ. ಎಲೆನ್ನಳಿಗೆ ಪಕ್ಕದ ಕೋಣೆಯಲ್ಲೇನೋ ಕೆಲಸವಿರಲು ಅವಳು ಎದ್ದು ಹೋದಳು. ನಾನು ಸುತ್ತಲೂ ತಿರುಗಿ ನೋಡಿದೆ. ಕೋಣೆಯ ಕಿಟಕಿ ಗಳಿಂದ ಶೀತಲ ಮಾರುತ ನನ್ನ ಮೇಲೆ ಬೀರಿತು. ಆಗ ಕೋಣೆಯ ಮಧ್ಯೆಯಿದ್ದ ಮೇಜಿನ ಮೇಲೆ ಒಂದು ಶವ ಮಲಗಿದ್ದುದನ್ನು ಕಂಡೆ. ಪೆಟ್ಟಿಗೆಯಲ್ಲಿ—ಶ್ವೇತ ವಸ್ತ್ರಧಾರಿ—ಬಿಳಿಯ ಗಡ್ಡದ ಮುದುಕ. ಅವನ ಮೊಣಕಾಲ್ಗಳು, ಮುಷ್ಟಿಯ ಹಿಡಿಗಳಂತೆ ವಸ್ತ್ರಸುಕನ್ನು ಎತ್ತಿ ತೋರು ತ್ತಿತ್ತು. ಮುಖ ಬತ್ತಿ ಭಯಂಕರವಾಗಿತ್ತು. ಬೆಳಕಿನಲ್ಲಿ ಎಲ್ಲವೂ ಕಂಡು ಬಂತು. ಮಾತನಾಡಲಾಗದೆ ಮುಖ ತಿರುಗಿಸಿದೆ.

ಎಲೆನ್ನಳು ಬಂದಾಗ ವೇಷ ಧರಿಸಿ ಹೊರಡಲು ಸಿದ್ಧನಾಗಿದ್ದೆ. ಅವಳ ಆಲಿಂಗನಕ್ಕೆ ಸಹಕರಿಸಲು ಮನವೊಪ್ಪಲಿಲ್ಲ. ಬಾಗಿಲವರೆಗೂ ನನ್ನೊಂದಿಗೆ ಬರಬೇಕೆಂದವಳಾಸೆ, ಬೇಡವೆಂದು ಹೇಗೆನ್ನಲಿ? ಬಾಗಿಲ ಹತ್ತಿರ ಬಂದಾಗ ಹೊರಗೆ ಕಾಣದಿರದಂತೆ ಗೋಡೆಯನ್ನೊತ್ತಿ ನಿಂತಳು.

'ಗುಡ್-ಬಯ್'

'ನಾಳೆಯ ತನಕ' ಎಂದೆ. ಪರೀಕ್ಷೆ ಮಾಡುವ ಉದ್ದಿಶ್ಯದಿಂದ—

'ಇಲ್ಲ, ನಾಳೆಯತನಕವಲ್ಲ' ಎಂದಳು.

'ಏತಕ್ಕೆ ನಾಳೆಯ ತನಕವಲ್ಲ.'

‘ಅಷ್ಟೊಂದು ಪ್ರಶ್ನೆಗಳು ಬೇಡ. ಪ್ರಿಯಾ, ನಾಳೆ ನಾನು ಒಂದು ಶವಸಂಸ್ಕಾರಕ್ಕೆ ಹೋಗುತ್ತೇನೆ. ನನ್ನೊಬ್ಬ ಬಂಧು ಮೃತಪಟ್ಟಿದ್ದಾನೆ. ಅಲ್ಲಿ—ನಿನಗೆ ಗೊತ್ತೇ ಇದೆ.’

‘ಹಾಗಾದರೆ ನಾಳಿದ್ದು.’

‘ಆಗಲಿ—ನಾಳಿದ್ದು ಈ ಬಾಗಿಲ ಬಳಿಯಲ್ಲಿ, ನಿನ್ನನ್ನು ನೋಡುವೆ–’

‘ಗುಡ್-ಬಯ್’ ಎಂದು ನಾನು ಹೊರಟೆ.’

ಅವಳು ಯಾರು? ಶವ ಯಾವುದು? ಜೋಲುಬಿದ್ದ ಕಟಿಬಾಯ್, ಮುಷ್ಟಿ ಹಿಡಿದ ಅಸ್ಥಿ ಹಸ್ತ, ಅಬ್ಬಾ!—ಎಷ್ಟು ಭಯಂಕರ!!—ನಾಳೆಯಲ್ಲ ನಾಳಿದ್ದು ಅವಳು ನನಗೆ ಕಾಯುತ್ತಿರುತ್ತಾಳೆ. ನಾನು ಅವಳನ್ನು ಪುನಃ ನೋಡುವುದೊಳ್ಳಿತೇನು?

ನೇರವಾಗಿ ನಾನು ಬರ್ನಿಯಾ ಕ್ಯಾಫೆಗೆ ಹೋಗಿ ನಾಮಸ್ಥಾನ ನಿರ್ದೇಶಕ ಪುಸ್ತಕ (Directory) ವನ್ನು ತೆಗೆದು ಅವಳ ಮನೆಯ ವಿಳಾಸ ವನ್ನು ಹುಡುಕಿದೆ. ಅದು—ಅದು ಅಲ್ಲಿತ್ತು. ಪ್ರಾತಃಕಾಲದ ವರ್ತಮಾನ ಪತ್ರಿಕೆಗಳು ಬರುವ ತನಕ ಆತುರದಿಂದ ಕಾದೆ. ಬಂದೊಡನೆಯೇ ಮೃತ-ಸೂಚನೆಗಳ ಕಡೆ ತಿರುಗಿಸಲು ನಾನು ಯೋಚಿಸಿದಂತೆಯೇ ಖಂಡಿತವಾಗಿಯೂ ಇದ್ದೇ ಇದ್ದಿತು. ಜೊತೆಗೆ ಅವಳದೂ ಕೂಡ–ದೊಡ್ಡಕ್ಷರಗಳಲ್ಲಿ ‘ನನ್ನ ಪತಿ, ೫೩ ವಯಸ್ಕ. ದೀರ್ಘ ಕಾಲದ ರೋಗದಿಂದ ಇಂದು ಮೃತಪಟ್ಟ’ ಪ್ರಕಟ ನೆಯ ತಾರೀಖು ಮೊನ್ನೆಯದಾಗಿತ್ತು. ಬಹು ಕಾಲವಾಗಿರಬಹುದು ಕುಳಿತು ಚಿಂತಿಸಿದೆ.

**ಮುದುಕನಿಗೆ ಮದುವೆ—ಹೆಂಡತಿಗೆ ಕುಣಿಯುವ ಕಿರಿತನ—**
**ಅವನಿಗೆಂದಿಗೂ ಹರಿಯದ ರೋಗ—ಕೊನೆಗೊಂದು ದಿನ ಸಾವು**
**ಬಾಲವಿಧವೆಯ ನಿಶ್ಚಿಂತೆಯ ದೀರ್ಘ ಶ್ವಾಸ!!!**

———

# ರಷ್ಯದ ಕಥೆಗಳು

ಕಥನಕಲೆಯಲ್ಲಿ ರಷ್ಯನ್ ಲೇಖಕರು ಅಪೂರ್ವ ಸಿದ್ಧಿಯನ್ನು ದೊರಕಿಸಿಕೊಂಡಿದ್ದಾರೆ. ಕಥನ ಕಲೆಯನ್ನು ಒಂದು ವ್ಯವಸ್ಥಿತ ರೂಪಕ್ಕೆ ತಂದು, ಅದಕ್ಕೆ ಬೇಕಾದ ತಂತ್ರವೈಶಿಷ್ಟ್ಯವನ್ನು ನಿರ್ಮಾಣ ಮಾಡಿದ ಕೀರ್ತಿಯು ಬಹುಭಾಗ ರಷ್ಯನರದು ಮತ್ತು ಫ್ರಾನ್ಸಿನ ಸಾಹಿತಿಗಳದು. ರಷ್ಯನ್ ಸಾಹಿತ್ಯ ಪಾಶ್ಚಾತ್ಯ, ಪ್ರಾಚ್ಯ ಎರಡು ಗೋಳಗಳ ಮೇಲೂ ತನ್ನ ಪ್ರಭಾವವಮುದ್ರೆಯನ್ನೊತ್ತಿದೆ.

ಕಥನಕಲೆಯಲ್ಲಿ ರಷ್ಯಾ ಲೇಖಕರು ತೋರಿರುವ ನೈಪುಣ್ಯಕ್ಕೆ ಅವರು ಜೀವನವನ್ನು ನೋಡುವ ನೋಟವೇ ಮೂಲಕಾರಣವೆನ್ನಬಹುದು. ಭಾರತೀಯರಂತೆ ರಷ್ಯನರೂ ಅಧ್ಯಾತ್ಮವಾದಿಗಳು. ದೇವರಲ್ಲಿ ಅವರಿಗೆ ಅಸೀಮ ನಂಬಿಕೆ. ಈ ನಂಬಿಕೆಗೆ ಅಜ್ಞಾನ, ನಿರಕ್ಷರತೆಯ ಪುಟವೂ ಸಿಕ್ಕಿ ರಷ್ಯಾದಲ್ಲಿ ದೇವರುಗಳ, ದೇವದೂತರ, ಅರ್ಚಕರ ಹಾವಳಿ ಅಧಿಕವಾಯಿತು. ಇಂದಿನ ಬಾಳುವೆಯನ್ನು ಮರೆತ, ರಷ್ಯಾದ ಜನ ಕನಸಿನ ಸ್ವರ್ಗದಲ್ಲಿ ವಿಹರಿಸುತ್ತಿದ್ದರು. ರಷ್ಯಾದ ಮಹಾಕ್ರಾಂತಿ ಜನತೆಯ ಈ ಮುಖವನ್ನು ಬದಲಾಯಿಸಿತು. ಸತ್ತಮೇಲೆ ಸ್ವರ್ಗವನ್ನು ಬಯಸುವುದಕ್ಕಿಂತ ಇರುವಾಗ ಸ್ವರ್ಗವನ್ನು ಅನುಭವಿಸುವುದು ಲೇಸು ಎಂದು ಲೆನಿನ್ ಸಾರಿದ. ಗಾಂಧೀಜಿಯವರು ಹೇಳಿರುವಂತೆ 'ದೇವರು ಕೂಡ ಮನುಷ್ಯನಿಗೆ ರೊಟ್ಟಿಯ ರೂಪದಲ್ಲಿ ಕಾಣಿಸಿಕೊಳ್ಳಬೇಕು' ಎಂಬ ತತ್ತ್ವವನ್ನು ಪ್ರಚಾರ ಮಾಡಿದ.

ಧರ್ಮದ ಅಫೀಮು ತೆಗೆದುಕೊಂಡು ಮಲಗಿದ್ದ ರಷ್ಯಾ ಕಣ್ದೆರೆಯಿತು. ಇಂದಿನ ಬಾಳನ್ನು ಹಸನುಮಾಡಿ, ಪೃಥ್ವಿ ಸತ್ಯವಾಗುವಂತೆ ಮನುಷ್ಯನ ಜೀವನ ಭವ್ಯವಾಗುವಂತೆ ರಷ್ಯಾದ ಸಾಹಿತಿಗಳು ದುಡಿದರು. ಈ ಸಾಧನದ ಫಲವಾಗಿ ಅಧ್ಯಾತ್ಮ, ಆದಿಭೌತಿಕ ಜ್ಞಾನಗಳ ಸಮರಸವುಂಟಾಯಿತು. ಯೋಗಭೋಗಗಳೆರಡನ್ನೂ ಒಂದಾಗಿ ಕಾಣುವ, ಸಾಧಿಸುವ ಜಾಣು ರಷ್ಯಾದಲ್ಲಿ ಬೆಳೆಯಿತು.

ರಷ್ಯಾದ ಸಣ್ಣ ಕಥೆಗಳಲ್ಲಿ ಈ ಸಮನ್ವಯ ವಿಜ್ಞಾನದ ಶೋಭೆಯನ್ನು ಪೂರ್ಣಕಲೆಯಿಂದ ಕಾಣಬಹುದು. 'ಟಾಲಸ್ಟಾಯ್, ಡೊಸ್ಟೊಯೆವಸ್ಕಿ, ಗಾರ್ಕಿ, ಕುಪ್ರಿನ್, ಸೋಲೊಗುಬ್' ಇವರು ತಮ್ಮ ಕಥೆಗಳಲ್ಲಿ ಇಂದು ನಾಳೆಗಳ ಸಂಗಮವನ್ನು ಸಾಧಿಸಿದರು.

ಇಲ್ಲಿ ಪ್ರಸಿದ್ಧ ರಷ್ಯನ್ ಕಥೆಗಾರನಾದ ಫಿಡಾರ್ ಸೊಲೊಗುಬ್‌ನ ಎರಡು ಸಣ್ಣ ಕಥೆಗಳನ್ನು ಅನುವಾದ ಮಾಡಿ ಕೊಡಲಾಗಿದೆ.

---

## ೧. ಅಲಾಲುಟೋಪಿ ಕಲ್ಲು

ಊರಿನ ಒಂದು ಬೀದಿಯ ನೆಲಕ್ಕೆ ಗುಂಡುಕಲ್ಲುಗಳನ್ನು ಹಾಸಿದ್ದರು. ಗಾಡಿಯ ಚಕ್ರ ಒಂದು ಕಲ್ಲನ್ನು ಕೆದಕಿತು. ಬೇರೆಯಾದ ಕಲ್ಲು ತನ್ನಷ್ಟಕ್ಕೇ ಹೇಳಿಕೊಂಡಿತು 'ಇತರ ಕಲ್ಲುಗಳ ಜತೆಯಲ್ಲಿ ನಾನೇಕೆ ಕಿರುಕುಳ ಬಾಳುವೆ ಮಾಡಬೇಕು. ನಾನು ಸ್ವತಂತ್ರವಾಗಿ ಬದುಕಬೇಕು.'

ಒಬ್ಬ ಹುಡುಗ ಬಂದ, ಆ ಕಲ್ಲನ್ನು ಎತ್ತಿಕೊಂಡ. ಕಲ್ಲು ಯೋಚಿಸಿತು 'ದೇಶಸಂಚಾರ ಮಾಡಬೇಕೆಂದಿದ್ದೆ. ಈಗ ಅವಕಾಶವಾಯಿತು. ಸಾಕಷ್ಟು ನಾನು ಬಯಸಬೇಕು, ಅಷ್ಟೆ.'

ಹುಡುಗ ಕಲ್ಲನ್ನು ಒಂದು ಮನೆಯ ಮೇಲೆ ಒಗೆದ.

ಕಲ್ಲು ಯೋಚಿಸಿತು 'ಹಾರಬೇಕೆಂದಿದ್ದೆ. ಅದು ಸಾರ್ಥಕವಾಯಿತು. ಬಹಳ ಸುಲಭ—ನಾನು ಮನಸ್ಸು ಮಾಡಬೇಕು, ಅಷ್ಟೆ.'

ಕಲ್ಲು ಹೋಗಿ ಗಾಜಿನ ಕಿಟಕಿಯ ಮೇಲೆ ಅಪ್ಪಳಿಸಿತು. ಗಾಜು ಒಡೆಯುತ್ತಾ ಕೂಗಿಕೊಂಡಿತು. 'ದುರುಳಾ! ನೋಡು ಏನು ಅನ್ಯಾಯ ಮಾಡುತಿದ್ದೀ!'

ಕಲ್ಲು ಉತ್ತರಿಸಿತು 'ನನ್ನ ದಾರಿ ಬಿಟ್ಟು ದೂರ ನೀನು ನಿಲ್ಲಬೇಕಾಗಿತ್ತು, ಎಲ್ಲವೂ ನನ್ನ ಅನುಕೂಲಕ್ಕಾಗಿ. ಇದೇ ನನ್ನ ಗುರಿ.' ಕಲ್ಲು ಮೃದುತಲ್ಪದ ಮೇಲೆ ಬಿತ್ತು. ಆಗ ಯೋಚಿಸಿತು. 'ಸ್ವಲ್ಪ ಹಾರಾಡಿದ್ದೇನೆ. ಈಗ ತುಸು ಮಲಗಿ ವಿಶ್ರಮಿಸಿಕೊಳ್ಳುತ್ತೇನೆ.'

ಆಳುಮಗ ಬಂದು ಕಲ್ಲನ್ನೆತ್ತಿ ಹಾಸಿಗೆಯಿಂದಾಚೆ ಕಿಟಕಿಯ ಹೊರಗೆ ಒಗೆದ. ಅದು ಮತ್ತೆ ಗುಂಡುಕಲ್ಲು ಹಾಸಿದ್ದ ಬೀದಿಯಲ್ಲಿ ಬಂದು ಬಿತ್ತು.

ಆಗ ಕಲ್ಲು ತನ್ನ ಜತೆಗಾರರಿಗೆ ಹೇಳಿತು 'ಕುಶಲವೇ ಸೋದರರೇ, ಎದುರಿಗಿದ್ದ ಮಹಡಿ ಮನೆಗೆ ಹೋಗಿ ಬರುತ್ತಾ ಇದ್ದೇನೆ. ಅದೇಕೋ ಶ್ರೀಮಂತಿಕೆ ನನಗೆ ಹಿಡಿಸಲಿಲ್ಲ; ನನ್ನ ಹೃದಯ ಸಾಮಾನ್ಯ ಜನತೆಗಾಗಿ ಹಂಬಲಿಸಿತು. ಅದಕ್ಕಾಗಿ ಮರಳಿ ಇಲ್ಲಿಗೇ ಬಂದೆ.'

---

## ೨. ಸಮತೆ

ಒಂದು ದೊಡ್ಡ ಮೀನು, ಸಣ್ಣ ಮೀನೊಂದನ್ನು ಬೆನ್ನುಹತ್ತಿ, ಸ್ವಾಹಾ ಮಾಡಲು ಯತ್ನಿಸಿತು.

ಕಿರೀಮೀನು ಕೂಗಿಕೊಂಡಿತು.

'ಇದು ಅನ್ಯಾಯ. ನಾನೂ ಬದುಕಬೇಕು. ನ್ಯಾಯದ ಮುಂದೆ ಎಲ್ಲ ಮೀನುಗಳೂ ಒಂದೇ ಸಮ.'

ದೊಡ್ಡ ಮೀನು ಉತ್ತರಿಸಿತು,

'ಏನು ಸಮಾಚಾರ? ನಾವು ಸಮವೇ ಅಲ್ಲವೇ? ಚರ್ಚೆಮಾಡಲು ನನಗೆ ಇಷ್ಟವಿಲ್ಲ. ನಾನು ನಿನ್ನನ್ನು ಸ್ವಾಹಾ ಮಾಡುವುದು ನಿನಗೆ ಇಷ್ಟ ವಿಲ್ಲದಿದ್ದರೆ, ನೀನು ನನ್ನನ್ನು ಸ್ವಾಹಾಮಾಡು—ಸಾಧ್ಯವಾದರೆ, ಹೆದರಬೇಡ, ನಾನೇನೂ ನಿನ್ನ ಜತೆ ಕಾದಾಡುವುದಿಲ್ಲ.'

ಸಣ್ಣ ಮೀನು ದೊಡ್ಡ ಮೀನನ್ನು ನುಂಗಲು ಬಾಯಿ ತೆರೆಯಿತು. ಸಾಧ್ಯವಾಗಲಿಲ್ಲ. ನಿಟ್ಟುಸಿರು ಬಿಡುತ್ತಾ ಹೇಳಿತು:

'ನೀನೇ ಗೆದ್ದೆ. ನನ್ನನ್ನು ನುಂಗಿಕೋ.'

———

# ಸಮಾಗಮ

ರಂಗನಾಥ ಊರಿಗೆ ಬರುವ ಸುದ್ದಿ ಕೇಳಿ ಲಕ್ಷ್ಮಿ ಹಿಗ್ಗಿಹೋದಳು. ಅವಳ ಮನಸ್ಸು ಯಾವದೋ ಒಂದು ವಿಚಿತ್ರತರವಾದ ಆನಂದಸಾಮ್ರಾಜ್ಯಕ್ಕೆ ಜಾರಿಹೋಯಿತು. ಹತ್ತು-ಹನ್ನೆರಡು ವರ್ಷಗಳ ತನ್ನ ಹಿಂದಿನ ಬಾಳುವೆಯ ಚಿತ್ರಗಳು ಮೇಲೆ ಮೇಲೆ ಬರಲಾರಂಭಿಸಿದುವು. ತೀರಿಹೋದ ತನ್ನ ತಂದೆ ತಾಯಿ— ಅವರ ಸೌಜನ್ಯ—ಸಿರಿವಂತಿಗೆಯ ಸುಸ್ಥಿತಿಗೆಯ ಮೇಲಿದ್ದರೂ ದಾರಿದ್ರ್ಯದ ದಟ್ಟವನ್ನು ಕಂಡು ಅವರಿಗಿದ್ದ ಅಪಾರ ಮರುಕ—ಇದರ ಫಲವಾಗಿ ಬಡತನದಿಂದ ತೊಳಲುತ್ತಿದ್ದ ರಂಗನಾಥನನ್ನು ಕರೆತಂದು ಮನೆಯಲ್ಲಿಟ್ಟುಕೊಂಡು ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತಲೂ ಹೆಚ್ಚಿನ ಪ್ರೇಮದಿಂದ ಸಾಕಿ ಸಲಹಿದುದು. ತಾನು ರಂಗನಾಥನೊಂದಿಗೆ ಒಡಹುಟ್ಟಿದವಳಂತೆ ಇದ್ದುದು. ರಂಗನಾಥ ಬಿ. ಎಸ್ ಸಿ. ಮುಗಿಸಿಕೊಂಡು ಎಂ. ಎಸ್ ಸಿ., ಯಲ್ಲಿ ತೇರ್ಗಡೆಹೊಂದಿ ಬರಲು ಕಲ್ಕತ್ತೆಗೆ ಹೋಗಿ ಅಲ್ಲಿಯೇ ಒಂದು ಶಾಲೆಯಲ್ಲಿ ಅಧ್ಯಾಪಕನಾಗಿ ನಿಂತದ್ದು. ಈಗ....ಆರು ವರುಷಗಳು ಕಳೆದ ಮೇಲೆ ....ಯಾವದೋ ಒಂದು ವೈಜ್ಞಾನಿಕ ಶೋಧಕ್ಕೆ ಇಂಗ್ಲೆಂಡಿನ ವೈಜ್ಞಾನಿಕರ ಮನ್ನಣೆ ಪಡೆಯಲು ತನ್ನ ವಿಶ್ವವಿದ್ಯಾಲಯದವರು ಪುರಸ್ಕರಿಸಿ ಕೆಲಸವನ್ನು ಕೊಟ್ಟು ಕರೆಸಿರುವುದು. ತಾನು ಬಂದು ಹಳೆಯ ಮಮತೆಯಿಂದ ಲಕ್ಷ್ಮಿಯ ಮನೆಯಲ್ಲೇ ಉಳಿಯುವುದಾಗಿ ತಾರು ಕೊಟ್ಟಿರುವುದು....ಎಲ್ಲವೂ ಅವಳ ದೃಕ್ಪಟಲದ ಮೇಲೆ ಕನಸಿನ ನೋಟಗಳಂತೆ ತೇಲಿಹೋದವು.

ಲಕ್ಷ್ಮಮ್ಮನಿಗೆ ಅಂತಹ ವಯಸ್ಸೇನೂ ಆಗಿರಲಿಲ್ಲ. ಇಪ್ಪತ್ತೆರಡನೆಯ ವಯಸ್ಸಿಗೇ ಅಜ್ಜಿಯಂತೆ ಕುಳಿತು ಹಳೆಯ ಕತೆಯನ್ನು ನೆನೆದು ಹಿಗ್ಗಿನಿಂದ ಕಣ್ಣೀರ್ಗರೆಯಬೇಕಾಗಿರಲಿಲ್ಲ. ಚೆನ್ನಾಗಿ ಚಾಳಿ, ಬದುಕಿ, ನಾಲ್ಕಾರು ಬಡ ಕುಟುಂಬಗಳ ಶ್ರೀ ಲಕ್ಷ್ಮಿಯಾಗುವ ನಾಥನ–ಸಂಪತ್ತು ಅವಳನ್ನು ಕೂಡಿಯೇ ಇತ್ತು. ಆದರೆ ತನ್ನ ತವರು ಅಳಿಸಿಹೋಯಿತಲ್ಲಾ........ತಾನು ಯಾರ ಪೋಷಣೆಯಿಂದ ಹೊರಬಿದ್ದೆನೋ ಆ ಮನೆಯೇ ಮುರಿದುಹೋಯಿತಲ್ಲಾ ಎಂಬ ಕೊರಗು ಯಾವ ಹೆಣ್ಣುಮಗಳನ್ನು ತಾನೇ ಬಿಟ್ಟೀತು. ಇಂದು

ತನ್ನ ತವರಿನ ನೆನಪನ್ನು ಕೊಡುವ ಒಂದು ತಂತು ಅವಳಿಗೆ ದೊರೆ ತಂತಾಯಿತು.

ರಂಗನಾಥನನ್ನು ಏನೆಂದು ಮಾತನಾಡಿಸಲಿ. ಅಂದವನು ಜತೆಯು ಗೆಳೆಯರಂಗ....ಇಂದು ಜಗದ್ವಿಖ್ಯಾತನಾದ ಒಬ್ಬ ವೈಜ್ಞಾನಿಕ. ಅಂದವನು ತನ್ನೊಬ್ಬಳ ಹೆಮ್ಮೆಯ ವಸ್ತು....ಇಂದು ಅಖಿಲ ಭಾರತದ ಹೆಮ್ಮೆಯ ಹಿರಿ ವ್ಯಕ್ತಿ. 'ರಂಗನಾಥರಾಯರೇ' ಎನ್ನಲೇ ಎಂದುಕೊಳ್ಳುವಳು. ಅದು ಒಂದು ಬಗೆಯ ಅನಾದರವನ್ನು....ಹಿಂದಿನ ಸಿರಿಸುಖವನ್ನು ಮರೆತ ಕೃತಘ್ನತೆ ಯನ್ನು ತೋರುವುದು. ಏನೇನು ಯೋಚಿಸಿದರೂ ಬಗೆಹರಿಯದು. ಹೋಗಲಿ—ಹೊತ್ತಿಗೆ ಹೇಗೆ ಬುದ್ಧಿ ಬಂದರೆ ಹಾಗೆ ಮಾಡಿಬಿಡುವುದು ಎಂದಂದುಕೊಂಡು ಸ್ವಾಗತ ವ್ಯವಸ್ಥೆಯನ್ನು ಮಾಡಲಾರಂಭಿಸಿದಳು.

ರಂಗನಾಥನಿಗೆ ಒಂದು ಪ್ರತ್ಯೇಕ ಕೋಣೆ ಸಿದ್ಧವಾಯಿತು. ಅದರಲ್ಲಿ ಒಂದು ಮಂಚ, ಒಂದು ಮೇಜು, ಒಂದೆರಡು ಕುರ್ಚಿಗಳು, ಒಂದು ನಿಲುಗನ್ನಡಿ—ಇವುಗಳೂ ಬಂದು ಸೇರಿಕೊಂಡವು.

ಹೆಂಡತಿಯ ಎಲ್ಲ ಆಸೆ, ಆಕಾಂಕ್ಷೆ, ನಡೆ ನುಡಿಗಳಿಗೂ ಅನಂತಯ್ಯನ ಪೂರ್ಣ ಅನುಮೋದನವಿತ್ತು. ಅನಂತಯ್ಯನ ಜೀವನ ಹೆಂಡತಿಯ ಅನು ರಾಗದಿಂದ ತುಂಬಿಹೋಗಿತ್ತು. ಅವಳ ಮಾತೇ ಅವನಿಗೆ ವೇದವಾಕ್ಯ; ಅವಳ ಸಲಹೆಯೇ ಅವನಿಗೆ ರಾಜಾಜ್ಞೆ. ಶ್ರೀಮಂತರ ಮನೆಯಿಂದ ಬಂದರೂ ತನ್ನ ಸಾಮಾನ್ಯ ಜೀವನಕ್ಕೆ ಹೊಂದಿಕೊಂಡು, ಅದರಲ್ಲಿಯೇ ಎಲ್ಲ ಸುಖವನ್ನೂ ಕಾಣುತ್ತಾ, ಯಾವ ಬಗೆಯ ಕುಂದುಕೊರತೆಯನ್ನೂ ಎಣಿಸದೆ ಅವಳಿದ್ದುದ್ದು ತನ್ನ ಭಾಗ್ಯವಿಶೇಷವೆಂದೇ ಅವನ ಭಾವನೆ. ಕ್ಷುಲ್ಲಕವಾದ ವ್ಯಾಪಾರ ಜೀವನದಲ್ಲಿಯೇ ಹೆಣಗಿ ಹೆಣಗಿ ಸೊರಗುತ್ತಿದ್ದ ತನ್ನ ಆತ್ಮನ ಆಸರೆ ಲಕ್ಷ್ಮಿಯೆಂದೇ ಅವನ ಮನವರಿಕೆ. ತನ್ನ ತಾರುಣ್ಯವನ್ನೆಲ್ಲಾ ಹೊಟ್ಟೆ ಬಟ್ಟೆಯ ಪಾಡು ನೋಡುವುದರಲ್ಲಿಯೇ ವ್ಯಯಮಾಡಿಬಿಡುತ್ತಿದ್ದೇ ನಲ್ಲಾ ಎಂದು ಮರುಗುವನು....ಆದರೆ ಮರುಕ್ಷಣವೇ ತಾನು ದುಡಿಯದಿದ್ದರೆ ಲಕ್ಷ್ಮಿಯನ್ನು ಹೇಗೆ ನೋಡಿಕೊಳ್ಳುವುದು ಎಂದು ಸಮಾಧಾನಪಟ್ಟು ಕೊಳ್ಳುವನು. ಇನ್ನು ನಾಲ್ಕೈದು ವರುಷ ದುಡಿದುಬಿಟ್ಟರೆ ತನಗೆ ತರುವಾಯ ಬರುವ ಆದಾಯದಲ್ಲಿ ಸುಖವಾಗಿ ಇದ್ದುಬಿಡಬಹುದು—ಅಲ್ಲಿನ

ತನಕ ಎಷ್ಟೇ ಕಷ್ಟನಷ್ಟಗಳು ಸಂಭವಿಸಿದರೂ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುವುದೇ ನ್ಯಾಯವಾದದ್ದು ಎಂದುಕೊಂಡು ತನ್ನ ಪರಿಸ್ಥಿತಿಗೆ ಹೊಂದಿಕೊಳ್ಳುತ್ತಿದ್ದನು.

ರಂಗನಾಥ ಸ್ವಂತ ಮನೆ ಮಾಡಿ ನಿಲ್ಲುವ ತನಕ ತನ್ನಲ್ಲಿಯೇ ಬಂದುಳಿಯಬೇಕೆಂದು ಅನಂತಯ್ಯನೇ ಬರೆದಿದ್ದ. ಇದು ಗಂಡಹೆಂಡಿರಲ್ಲಿ ಹೆಚ್ಚಿನ ಅನುರಾಗಕ್ಕೆ ಕಾರಣವೂ ಆಯಿತು. ರಂಗನಾಥ ತನ್ನ ಹೆಂಡತಿಯ ಕೂಡೆ ಆಡಿ ಬೆಳೆದವನು ಎಂಬ ಅಭಿಮಾನದಿಂದ ಲೌಕಿಕವಾದ ಅನೇಕ ಪ್ರಮೇಯಗಳನ್ನು ಮರೆತು ಸರಳಹೃದಯದಿಂದ ಅವನನ್ನು ತನ್ನ ಮನೆಗೆ ಕರೆದ ಗಂಡನ ದೊಡ್ಡ ಮನಸ್ಸು ಲಕ್ಷ್ಮಮ್ಮನನ್ನು ಚಕಿತಳನ್ನಾಗಿ ಮಾಡಿತು. ಅನಂತಯ್ಯನದು ಒಂದು ಸ್ವಭಾವ. ತಾನು ಎಷ್ಟು ಉದಾರನೋ, ಸರಳನೋ, ಸಾಂತಃಕರಣನೋ ಅಷ್ಟೇ ಎಲ್ಲರೂ ಆಗಿದ್ದಾರೆಂದು ನಂಬುವುದು. ಇದರ ಜತೆಗೆ ಎಲ್ಲಿ ತನಗಿಂತಲೂ ತುಸುವಾದರೂ ಹೆಚ್ಚಿನ ಯೋಗ್ಯತೆ ಇದೆಯೋ ಅದನ್ನು ಮನಮುಟ್ಟಿ ಪುರಸ್ಕರಿಸುವುದು. ರಂಗನಾಥನಿಗೆ ಕಾಗದ ಬರೆಯುವಾಗ ಕೂಡ ಹೆದರಿ ಹೆದರಿ....ಅವನು ಈಗ ದೊಡ್ಡವನಾಗಿದ್ದಾನೆ....ಹಳೆಯದೆಲ್ಲವನ್ನೂ ಮರೆತಿದ್ದರೆ ಏನು ಗತಿ....ನಮ್ಮನ್ನು ಕಡೆಗಣಿಸಿಬಿಟ್ಟರೆ....ಎಂಬ ಶಂಕೆಯಿಂದಲೇ ಅತ್ಯಂತ ನಮ್ರತೆಯಿಂದ ಸ್ವಾಗತ ಬಯಸಿದ್ದ. ರಂಗನಾಥ ಕೂಡಲೆ ಒಪ್ಪಿ ತಾರು ಕಳುಹಿಸಿದುದು ಮನಸ್ಸಿನ ದೊಡ್ಡ ಭಾರವನ್ನಿಳುಹಿದಂತಾಯಿತು.

× × × ×

ರೈಲು ಬರುವ ಹೊತ್ತು ಸಮೀಪಿಸುತ್ತ ಸಮೀಪಿಸುತ್ತ ಇಬ್ಬರ ಉದ್ವೇಗವೂ ಹೆಚ್ಚುತ್ತ ಬಂದಿತು. ಅನಂತಯ್ಯನಿಗೆ ಒಂದೆಡೆ ನಿಲ್ಲಲು ಮನಸ್ಸಿಲ್ಲ. ಕ್ಷಣಕಾಲ ತೊಟ್ಟಿಯಲ್ಲಿ ಕಟ್ಟಿದ್ದ ಉಯ್ಯಲೆ ಮಣೆಯ ಮೇಲೆ ಕುಳಿತುಕೊಂಡು ತೂಗಿಕೊಳ್ಳುವನು — ಹಾಗೆಯೇ ಅದನ್ನು ಬಿಟ್ಟೆದ್ದು ಗೋಡೆಗೆ ನೇತುಹಾಕಿದ್ದ ವೆಂಕಟಪ್ಪನವರ 'ಅರ್ಧನಾರೀಶ್ವರ'ನನ್ನು ಎವೆಯಿಕ್ಕದೆ ನೋಡುವನು. ಮರುಕ್ಷಣವೇ ರಂಗನಾಥನಿಗೆ ಸಿದ್ಧವಾಗಿದ್ದ ಕೋಣೆಗೆ ಹೋಗಿ ಕುರ್ಚಿ ಮೇಜುಗಳನ್ನು ಸ್ಥಳಪಲ್ಲಟಮಾಡಿ ಬೇರೆ ರೀತಿ

ಇಡುವನು. ಲಕ್ಷ್ಮಮ್ಮನೂ ಹಾಗೆಯೇ....ಒಂದು ಕ್ಷಣ ಕಾಫಿ ಕಷಾಯ ಹುಯ್ಯುವಳು....ಮರುಕ್ಷಣ ಗ್ರಾಮಫೋನಿಗೆ 'ಇಂದುಬಾಲಾ' ರಿಕಾರ್ಡು ಹಚ್ಚಿ ಅದು ಅರ್ಧ ಮುಗಿಯುವುದರೊಳಗೆ 'ನಾರಾಯಣರಾವ್ ವ್ಯಾಸ' ನನ್ನು ಹಾಡಿಸುವಳು. ಸ್ವಲ್ಪ ಕಾಲ ಹೀಗೆ ನಡೆದು ಗಂಡಹೆಂಡಿರಿಬ್ಬರೂ ಒಬ್ಬರ ಮನೋಗತವನ್ನೊಬ್ಬರು ಅರಿತುಕೊಂಡು ಗಟ್ಟಿಯಾಗಿ ನಕ್ಕು ಇಬ್ಬರೂ ಉಯ್ಯಾಲೆಯ ಮೇಲೆ ಕುಳಿತುಕೊಂಡು ತೂಗಿಕೊಳ್ಳಲಾರಂಭಿಸಿದರು.

ಈ ಉದ್ವೇಗ, ಅಸ್ತವ್ಯಸ್ತ ಮನೋಭಾವ ಮೊದಲೇ ರೂಪಸಿಯಾಗಿದ್ದ ಲಕ್ಷ್ಮಿಯನ್ನು ರೂಪರಾಶಿಯನ್ನಾಗಿ ಮಾಡಿಬಿಟ್ಟಿದ್ದವು. ತೆಳ್ಳನೆಯ ನೀಳವಾದ ಮುಖ. ಎಳಸಾಗಿ ತುದಿಯಲ್ಲಿ ತುಸು ಬಾಗಿದಂತಹ ಮೂಗು; ಅದರ ಮೇಲೆ ಕಣ್ಣು ಕೋರಯಿಸುವ ಒಂದು ಮೂಗುತಿ. ಕೆನೆಯಂತಹ ತುಂಬಿದ ಮೃದುವಾದ ಕೆನ್ನೆಗಳು. ಪ್ರೇಮಸುಧೆಯನ್ನು ತುಂಬಿ ತುಂಬಿ ಚೆಲ್ಲುವ ದಪ್ಪನೆಯ ಕೆಂದುಟಿಗಳು. ನೀಳವಾದ ಎವೆಗೂದಲನ್ನು ಪಡೆದ ವಿಶಾಲವಾದ ಕಂಗಳು. ಮುಂಗುರುಳನ್ನು ತಿದ್ದಿಕೊಂಡು, ಹೆರಳನ್ನು ಮಾಟವಾಗಿ ಹೆಣೆದುಕೊಂಡು ಅದಕ್ಕೆ ಮುತ್ತಿನಂತಹ ಮಲ್ಲಿಗೆಯನ್ನು ಮುಡಿಸಿ, ದೇಹದ ಲಾವಣ್ಯಕ್ಕೆ ಒಪ್ಪುವಂತೆ ಕರಿಯ ರೇಶಿಮೆಯ ಸೀರೆಯನ್ನು ಧರಿಸಿ, ಅದಕ್ಕನುಗುಣವಾದ ತೆಳು ನೀಲಿಬಣ್ಣದ ಕುಪ್ಪಸವನ್ನು ತೊಟ್ಟು ಮೋಹದ ಮಾಟವನ್ನು ಬೀರುತ್ತಿದ್ದ ಮಡದಿಯನ್ನು ಹತ್ತಿರಕ್ಕೆ ಸೆಳೆದುಕೊಂಡು ಅಪ್ಪಿದ. ಎಲ್ಲಿ ಅಲುಗಿದರೆ ಆ ಸ್ಪಂದನಾನಂದ ಕುಂದುವುದೋ ಎಂದು ಲಕ್ಷ್ಮಮ್ಮ ಹಾಗೆಯೇ ಅವನ ಬುಜದ ಮೇಲೆ ಒರಗಿದಳು.

ಉಯ್ಯಾಲೆ ತೂಗುತ್ತಲೇ ಇತ್ತು. ಹೀಗವರಿಬ್ಬರೂ ಎಷ್ಟು ಹೊತ್ತು ಸಮ್ಮೋಹನಾಸ್ತ್ರ ಬಂಧಿತರಾಗಿದ್ದರೋ ಎದುರಿಗಿದ್ದ ಗಡಿಯಾರಕ್ಕೆ ಮಾತ್ರ ಗೊತ್ತು. ಮನೆಯ ಮುಂದೆ ಒಂದು ಗಾಡಿ ಬಂದು ನಿಂತಂತಾಯಿತು. ಆಗಲೇ ಎಚ್ಚರ. ಅನಂತಯ್ಯ ಗಾಡಿಯ ಬಳಿಗೆ ಹೋಗಿ ರಂಗನಾಥನನ್ನು ಕರೆದುಕೊಂಡು ಅವನ ಸಾಮಾನುಗಳೊಂದಿಗೆ ಹಿಂದಿರುಗಿದ. ಸಾಮಾನುಗಳನ್ನೊತ್ತಟ್ಟಿಗಿಟ್ಟು ರಂಗನಾಥನೊಂದಿಗೆ ಅನಂತಯ್ಯ ಕುಳಿತುಕೊಂಡ. ಲಕ್ಷ್ಮಮ್ಮ ಎಲ್ಲಿಯೂ ಕಾಣದಿರಲು ಎದ್ದು ಅಡಿಗೆಯ ಮನೆಗೆ ಹೋಗಿ

ಕಂಬನಿತುಂಬಿದ್ದ ಲಕ್ಷ್ಮಿಯೊಂದಿಗೆ ಬಂದು ರಂಗನಾಥನೊಂದಿಗೆ ಕುಳಿತು ಕೊಂಡ.

ಎಲ್ಲರೂ ಮನಬಿಚ್ಚಿ ಮಾತನಾಡ ಬಯಸುವವರೇ ಆಗಿದ್ದರು; ಆದರೆ ಯಾರಿಗೂ ಮಾತು ಹೊರಡದು. ಕ್ಷಣಕಾಲ ಅಲ್ಲಿ ತಾನೇತಾನಾಗಿ ತುಂಬಿದ್ದ ಸುಂದರ ಶಾಂತಿಯ ಮುಸುಕು ಜಾರಿತು. ಅನಂತಯ್ಯನೇ ಮೆಲ್ಲನೆ

'ಪ್ರಯಾಣ ತುಂಬಾ ಆಯಾಸವಾಯಿತೇನೋ?'

'ಆಗಿತ್ತು. ಆದರೆ ಈಗ ನಿಮ್ಮನ್ನು ನೋಡಿ ಎಲ್ಲಾ ಮಾಯ ವಾಯಿತು....ಎಲ್ಲರೂ ಕ್ಷೇಮವೇ?'

'ನಿಮ್ಮ ದಯದಿಂದ' ಎಂದು ಲಕ್ಷ್ಮಮ್ಮ ಮೆಲ್ಲನೆ ನುಡಿದಳು.

ನಸುನಾಚಿ ತಲೆಬಾಗಿ ನಿಂತಿದ್ದ ಲಕ್ಷ್ಮಮ್ಮನನ್ನು ಶಿರದಿಂದ ಅಂಗುಷ್ಠದ ವರೆಗೂ ನೋಡುತ್ತಾ

'ಆರು ವರ್ಷದಲ್ಲಿ ಎಷ್ಟು ಬದಲಾದೆ ಲಕ್ಕೂ. ನಾನು ಹಿಂದೆ ನಿನ್ನನ್ನು ನೋಡಿದಾಗ ಆಗತಾನೇ ಅನಂತೂ ಮನೆಗೆ ಹೊರಟಿದ್ದೆ ಅಲ್ಲವೇ?'

'ಹೌದು, ಅದು ಬಹು ಹಿಂದಿನ ಮಾತು. ನೀವು ಎಲ್ಲಾ ಜ್ಞಾಪಕ ದಲ್ಲಿಟ್ಟಿರುವುದು ಹೆಚ್ಚೇ.'

'ಹೆಚ್ಚೇ....ಹೆಚ್ಚೇ ಅಲ್ಲವೇ. ನಿಮ್ಮ ತಂದೆಯ ಅನ್ನವನ್ನು ತಿಂದು.... ನಿನ್ನೊಂದಿಗೆ ಬೆಳೆದು ಎಲ್ಲವನ್ನೂ ಜ್ಞಾಪಕದಲ್ಲಿಟ್ಟಿರುವುದು ಹೆಚ್ಚೇ ಅಲ್ಲವೇ? ಲಕ್ಕೂ....ನೀನು ನನ್ನನ್ನು ನೀವು--ನೀವು ಎಂದು ಸಂಬೋಧಿಸುವುದು ನನಗೊಪ್ಪದು. ಆ ಉಪಚಾರವೆಲ್ಲಾ ಹೊರಗಿನವರಿಗಿರಲಿ.'

ಅನಂತಯ್ಯ ಅವಾಕ್ಕಾಗಿ ಹೋದ. ಇಂದು ಇಷ್ಟು ಹೆಸರು ಪಡೆದಿದ್ದರೂ ಒಣಹೆಮ್ಮೆಗೆ ತುತ್ತಾಗದಿರುವ ರಂಗನಾಥನ ತಿಳಿಮನಸ್ಸಿನ ಹೊಂಬೆಳಕಿಗೆ ಬೆರಗಾಗಿ ಹೋದ.

'ರಂಗೂ, ನೀನು ದೊಡ್ಡವನಾದೆ. ನಾಳೆ ಯುರೋಪಿಗೆ ಹೋಗಿ ಅಲ್ಲಿ ಡಾಕ್ಟರೇಟ್ ತೆಗೆದುಕೊಂಡು ಇನ್ನೂ ದೊಡ್ಡವನಾಗುವೆ. ನಿನ್ನನ್ನು ಹೇಗೆ 'ರಂಗೂ' ಅನ್ನುವುದು ಎಂದು ಅವಳೂ ನಾನೂ ಯೋಚಿಸಿದೆವು.'

'ಅನಂತೂ, ಪರದೇಶಿಯಂತಿದ್ದ ನನಗೆ ಒಂದು ನೆಲೆ ಕೊಟ್ಟು, ವಿದ್ಯಾ ದಾನ ಮಾಡಿ ಇಷ್ಟರ ಮನುಷ್ಯನನ್ನಾಗಿ ಮಾಡಿದವರು ನೀವು. ನನ್ನ

ಶ್ರೇಯಸ್ಸಿನ ಅಧಿಕಾಂಶ ನಿಮ್ಮ ಸೊತ್ತು; ನೀವೇ ಹೀಗಂದ ಮೇಲೆ ಇನ್ನೇನು ಹೇಳಲಿ.'

ಎಲ್ಲರ ಕಣ್ಣಲ್ಲಿಯೂ ನೀರೂರಿತು. ಲಕ್ಷ್ಮಮ್ಮನು ಇದೇ ಸಮಯ ವೆಂದು ಒಳಗೆ ತೆರಳಿ ರಂಗುವಿಗೂ ತನ್ನ ಯಜಮಾನರಿಗೂ ಕಾಫಿ ತಂದುಕೊಟ್ಟು ಮತ್ತೆ ಒಳಗೆ ಹೊರಟು ಹೋದಳು. ಅನಂತಯ್ಯ, ರಂಗೂ ಇಬ್ಬರೂ ಲೋಕಾಭಿರಾಮವಾಗಿ ಬಹಳ ಮಾತಾಡಿದರು. ಕೊನೆಗೆ ಮಾತಿಗೆ ಮಾತು ಬಂದು ಮೆಲ್ಲನೆ

'ಅನಂತೂ, ಎಲ್ಲಿ ನೋಡಿದರೂ ಒಂದು ತೊಟ್ಟಿಲೂ ಕಾಣುವುದೇ ಇಲ್ಲವಲ್ಲೋ ?'

ಅನಂತಯ್ಯ ದೀರ್ಘವಾಗಿ ಉಸಿರೆಳೆದು 'ಆ ಭಾಗ್ಯ ಕೇಳಿಕೊಂಡು ಬರಲಿಲ್ಲಪ್ಪಾ' ಎಂದ. ತಾನು ಆ ಪ್ರಶ್ನೆಯನ್ನು ಕೇಳಿದ್ದು ಅನುಚಿತ ವಾಯಿತೆಂದು ರಂಗನಾಥ ತನ್ನನ್ನು ತಾನೇ ಹಳಿದುಕೊಂಡ.

× × × ×

ರಂಗನಾಥನ ಬರುವನ್ನು ಆದರದಿಂದ ಬಯಸುವುದಕ್ಕೆ ಅನಂತಯ್ಯನಿಗೆ ಇನ್ನೂ ಒಂದು ಕಾರಣವಿತ್ತು. ತಾನು ಕಾರ್ಯನಿಮಿತ್ತ ಆಗಾಗ ಬೇರೆ ಊರುಗಳಿಗೆ ಹೋಗಬೇಕಾಗುತ್ತಿತ್ತು. ಕೆಲವು ಸಲ ಊರಿನಲ್ಲಿದ್ದರೂ ಮನೆಗೇ ಬರಲಾಗುತ್ತಿರಲಿಲ್ಲ. ಅಂತಹ ದಿವಸಗಳಲ್ಲಿ ಯಾರ ಸ್ನೇಹ ಸಂಪರ್ಕವೂ ಇಲ್ಲದೆ ಮೌನವ್ರತಾಚಾರಿಯಂತೆ ಲಕ್ಷ್ಮಮ್ಮ ಕ್ಷಣಗಳನ್ನು ಎಣಿಸುತ್ತ ಹೊತ್ತನ್ನು ನೂಕಬೇಕಾಗಿತ್ತು. ಈಗ ಆಕೆಗೆ ಕೊಂಚ ಸಮಾಧಾನ ದೊರೆಯಬಹುದೆಂಬ ಆಸೆ ಅವನ ಮನಸ್ಸಿಗೆ ತುಂಬ ಶಾಂತಿಯನ್ನಿತ್ತಿತು.

ಕ್ರಮಕ್ರಮೇಣ ರಂಗನಾಥ, ಲಕ್ಷ್ಮಮ್ಮ ಇವರುಗಳ ಮಧ್ಯೆಯಿದ್ದ ಹೊಸತನ....ಅಪರಿಚಿತಭಾವ ಹೋಗುತ್ತ ಬಂದು ಅವರು ಎಳೆತನದಲ್ಲಿ ಕೂಡಿ ಆಡುತ್ತ ಬೆಳೆದ ಲಕ್ಕೂ, ರಂಗರೇ ಆಗುತ್ತ ಬಂದರು. ಒಂದೊಂದು ದಿವಸ ಚದುರಂಗದ ಮಣೆಯ ಮುಂದೆ ಕುಳಿತುಬಿಟ್ಟರೆ ಅನಂತಯ್ಯನೇ ಬಂದು ನಿದ್ದೆಗೆಟ್ಟರೆ ಆರೋಗ್ಯ ಕೆಡುವುದೆಂಬ ನೀತಿಯನ್ನು ಬೋಧಿಸಿ ಆಟವನ್ನು ಮುಗಿಸಬೇಕಾಗುತ್ತಿತ್ತು. ಗ್ರಾಮಫೋನ್ ಹಚ್ಚಿ ಕುಳಿತರೆ ಅದರ

ಜತೆಯಲ್ಲಿ ಅವಳೂ, ಅವನೂ ಇಬ್ಬರೂ ನಿಶ್ಯಂಕೆಯಿಂದ ಹಾಡುತ್ತ ಮೈ ಮರೆತು ಕುಳಿತುಬಿಡುವರು. ರಂಗನಾಥ ತಾನು ಕಲ್ಕತ್ತೆಯಲ್ಲಿ ಕಲಿತ ಬಂಗಾಳಿ ಗೀತೆಗಳನ್ನು ಲಕ್ಷ್ಮಮ್ಮನಿಗೆ ಅಕ್ಕರೆಯಿಂದ ಹೇಳಿಕೊಡುವನು. ಅವಳು ಅದನ್ನು ಕಲಿತು ಮನೆಗೆ ಗಂಡ ಬಂದೊಡನೆಯೇ ಅವನೆದುರು ಹಾಡಿ 'ಭೇಷ್' ಅನ್ನಿಸಿಕೊಳ್ಳುವಳು. ಹೀಗೆ ಮೂವ್ವರ ಜೀವನ ಒಂದಾಗಿ, ಒಬ್ಬರ ಸುಖ ಮೂವ್ವರದಾಗಿ ಅವರ ಬಾಳು ಸಾಗುತ್ತಿತ್ತು.

ಲಕ್ಷ್ಮಮ್ಮನಿಗೆ ಅವರಿವರ ಮನೆಗೆ ಹೋಗಿ ಹರಟೆ ಕೊಚ್ಚುವ ಅಭ್ಯಾಸ ಮೊದಲಿನಿಂದಲೂ ಇರಲಿಲ್ಲ. ಈಗ ರಂಗನಾಥ ತಮ್ಮೊಂದಿಗೆ ಇರುವುದಕ್ಕೆ ಆರಂಭಿಸಿದಂದಿನಿಂದ ಇದ್ದ ಅವಕಾಶವೂ ಇಲ್ಲವಾಯಿತು. ನೆರೆಹೊರೆಯವರಿಗೆ ಕೊಂಚ ಕಿರಿಕಿರಿಯೂ ಆಯಿತು. ಸರಳ ಹೃದಯದ ಲಕ್ಷ್ಮಮ್ಮನ ನಡವಳಿಕೆ ಅವರಿಗೆ ವಿಲಕ್ಷಣವಾಗಿ ತೋರಿಬರಲಾರಂಭವಾಯಿತು. ದಿನಸಿ ಪದಾರ್ಥಗಳ ಸಾಲ ಕೇಳುವ ನೆವದಿಂದ ಬರುವ ಅಕ್ಕಪಕ್ಕದವರ ಗೂಢಚಾರ ಕೆಲಸ ಬೆಳೆಯುತ್ತ ಬಂತು. ಆದರವುಗಳ ಉದ್ದೇಶ ಕೂಡ ಲಕ್ಷ್ಮಮ್ಮನ ಗಮನಕ್ಕೆ ಬಾರವು. ಒಂದು ದಿನ ನೆರೆಯ ವೇಣೂಬಾಯಿ ಮನೆಯಲ್ಲಿ ಮಗುವಿಗೆ ವರ್ಷದ ಹೆಚ್ಚಿನ ಆರತಿ ಲಕ್ಷ್ಮಮ್ಮನೂ ಆಹ್ವಾನಿತಳಾಗಿ ಹೋಗಿದ್ದಾಳೆ. ಸ್ತ್ರೀಯರ ಆ ಮಹಾಸಭೆಯಲ್ಲಿ ಒಂದುಕಡೆ ಅರಿಶಿನ ಕುಂಕುಮದ ಓಡಾಟ—ಮತ್ತೊಂದು ಕಡೆ ಬಾಗಿನ ಭಂಡಾರಗಳ ಹಂಚಾಟ—ಮಗದೊಂದು ಕಡೆ ಹಾಡಿನ ಹೊಡೆದಾಟ. ಇನ್ನೊಂದು ಕಡೆ ನಾಲ್ಕಾರು ಹೆಂಗಸರ ಗುಸ ಗುಸ ಗುಂಪಲು. ಆ 'ಶಬ್ದಬ್ರಹ್ಮದ ಗುಮ್ಮಟ'ದಲ್ಲಿ ಯಾರು ಯಾರಿಗೆ ಏನು ಹೇಳುತ್ತಾರೆ ಅನ್ನುವುದನ್ನು ಪತ್ತೆಮಾಡುವುದು ಬಹು ದುಸ್ಸಾಧ್ಯವಾಗಿತ್ತು. ನಾಲ್ಕಾರು ಹೆಂಗಸರು ಸೇರಿದ್ದ ಒಂದು ಕಡೆಯಲ್ಲಿ ದೊಡ್ಡ ವಾದವೊಂದು ಎದ್ದ ಹಾಗೆ ಲಕ್ಷ್ಮಮ್ಮನಿಗೆ ಭಾಸವಾಗಿ ಆಕೆ ಕಿವಿಯನ್ನು ತುಸು ಚುರುಕು ಮಾಡಿ ಕುಳಿತುಕೊಂಡಳು. ನಾಗಮ್ಮನ ಗಂಡನ ಸುದ್ದಿಯಾಯಿತು—ಜೀವೂಬಾಯಿ ಸೀರೆ ಉಡುವ ವೈಯ್ಯಾರದ ವಿಚಾರ ಟೀಕೆಯಾಯಿತು—ಶಾನುಭೋಗರ ಹೆಂಡತಿಯ ಗಯ್ಯಾಳಿತನದ ವಿಚಾರವಾಯಿತು—ಸೀತಕ್ಕನ ಮನೆಯವರ 'ಮೈಯೆಲ್ಲಾ ಸಾಲದ' ಸುದ್ದಿಯಾಯಿತು—ಕೊನೆಗೆ ಅಡಗಿಸಿದ ದನಿಯಲ್ಲಿ ಲಕ್ಷ್ಮಮ್ಮನ ಬಂಜೆತನ,

ಆಕೆಯ ಗಂಡನ ನಪುಂಸಕತನಗಳ ವಿಚಾರ ಘೋರ ವಾದ ವಿವಾದವೆದ್ದಿತು. ಒಬ್ಬಿಬ್ಬರು ಲಕ್ಷ್ಮಮ್ಮನ ಕಡೆ ನೋಡಿ 'ಕಿಲ ಕಿಲ' ನಕ್ಕುಬಿಟ್ಟರು. ಲಕ್ಷ್ಮಮ್ಮ ಉಪಾಯಾಂತರದಿಂದ ವೀಳ್ಯವನ್ನು ತೆಗೆದುಕೊಂಡು ಮನೆಗೆ ಬಂದುಬಿಟ್ಟಳು. ಅವತ್ತು ಅವಳ ಮನಸ್ಸಿನಲ್ಲಿ ಹರಿತವಾದ, ಮೊನೆಯಾದ ಒಂದು ಈಟಿ ನೆಟ್ಟಂತಾಗಿತ್ತು.

ಪತಿ ಮನೆಗೆ ಬಂದೊಡನೆಯೇ ತನ್ನ ಅವಮಾನದ ಈ ಕಥೆಯನ್ನು ಹೇಳಿಕೊಂಡು ಮನಸ್ಸಿಗೆ ಸಮಾಧಾನವನ್ನುಂಟುಮಾಡಿಕೊಳ್ಳಬೇಕೆಂದು ಬಯಸಿದಳು. ಆದರೆ ಕಾರ್ಯಭಾರದಿಂದ ಅನಂತಯ್ಯ ಹತ್ತುಘಂಟೆಯ ವರೆಗೂ ಬರಲಿಲ್ಲ. ಇನ್ನು ಆಗ—ದಣಿದು ಬೇಸತ್ತು ಬೆಂಡಾಗಿ ಮನೆಗೆ ಬಂದಿರುವಾಗ ಇವುಗಳನ್ನೂ ಹೇಳಿ ಮನಸ್ಸನ್ನು ಮತ್ತಷ್ಟು ನೋಯಿಸು ವುದೇ ಎಂದುಕೊಂಡು ಸುಮ್ಮನಾದಳು. ತನ್ನೊಳಗೆ ತಾನೇ ನೆರೆಯ ಹೆಂಗಸರ ಹರಕು ಮಾತುಗಳನ್ನು ನೆನೆದು ಯೋಚಿಸಲಾರಂಭಿಸಿದಳು. ಯಾರದೂ ತಪ್ಪಿಲ್ಲ ಎಂದುಕೊಳ್ಳುವಳೊಮ್ಮೆ—ಮರುಕ್ಷಣವೇ ಯಾರದೂ ತಪ್ಪಿಲ್ಲದಿದ್ದರೆ ನೆರೆಹೊರೆಯವರು ನಮ್ಮನ್ನೇಕೆ ಹೀಗೆ ಹೀಯಾಳಿಸುತ್ತಾರೆ. ಮಕ್ಕಳಾಗುವುದೂ ಆಗದಿರುವುದೂ ಯಾರ ಇಷ್ಟ—ಎಲ್ಲವೂ ದೈವಾಧೀನ ಎಂದು ತನ್ನನ್ನು ತಾನೇ ಸಂತೈಸಿಕೊಳ್ಳುವಳು. ಮನಸ್ಸಿನಲ್ಲಿ ಏನು ಏನೋ ಭಾವನೆಗಳು ಏಳುವುವು. ಜರ್ಝರಿತಳಾಗಿ ಅಂತಹ ಭಾವನೆಗಳಿಗೆ ಎಡೆ ಕೊಟ್ಟು ತನ್ನನ್ನು ತಾನೇ ದೂರಿಕೊಳ್ಳುವಳು. ಹೆಂಗಸಿಗೆ ಗಂಡನಲ್ಲವೇ ಭಾಗ್ಯ; ಅವರು ಚೆನ್ನಾಗಿದ್ದರೆ ಮುಂದಿನ ಮಾತು ಎಂದು ತನ್ನ ಗಂಡನ ಕಡೆ ತಾಯಿಯ ಅಂತಃಕರಣ ಮೂಡಿದ ಹೃದಯದಿಂದ ನೋಡುತ್ತ ನೋಡುತ್ತ ನಿದ್ರಿತಳಾದಳು.

ಮಾರನೆಯ ದಿನ ಲಕ್ಷ್ಮಮ್ಮನ ಮುಖದಲ್ಲಿ ಎಂದಿನ ಕಳೆ ಲೋಪ ವಾಗಿತ್ತು. ಕೆಲಸದಲ್ಲಿ ತನ್ನ ನಿತ್ಯ ಕಾರ್ಯಗಳಲ್ಲಿ ದಿನದ ಚಟು ವಟಿಕೆಯಿಲ್ಲ. ಮುಖದ ಮೇಲೆ ಚಿಂತೆಯ ಕರಿ ನೆರಳು. ರಂಗನಾಥನ ಕುತೂಹಲ ಕೆರಳಿತು. ಇದಕ್ಕೆ ಕಾರಣವೇನಿರಬಹುದು? ಕೇಳಿದರೆ ಹೇಳುವ ಸ್ವಭಾವ ಅವಳದಲ್ಲ. ತಿಳಿದುಕೊಂಡ ಹೊರತೂ ಸುಮ್ಮನಾಗುವ ಸ್ವಭಾವ ತನ್ನದಲ್ಲ. ಏನು ಏನೋ ನೆಪ ಮಾಡಿಕೊಳ್ಳುವನು, ಅವಳು

ಉಪಾಯಾಂತರದಿಂದ ಅವನ ಪ್ರಶ್ನೆಯನ್ನು ನಿವಾರಿಸಿಬಿಡುವಳು. ಈ ಹಿಡಿಯುವಾಟಕ್ಕೆ ಬೇಸತ್ತು, ತಾನೇ ಸೋತೆನೆಂದೊಪ್ಪಿಕೊಂಡು

'ಲಕ್ಷ್ಮೀ, ಇವತ್ತು ಒಳ್ಳೆಯ ಸಿನಿಮಾ ಇದೆ ಹೋಗೋಣ ಬರುತ್ತೀಯಾ?'

'ಅವರನ್ನು ಬಿಟ್ಟು ಹೇಗೆ ಹೋಗೋದು.'

'ಅವರನ್ನು ಕೂಡಿ ಮತ್ತೆ ನಾಳೆ ಹೋದರಾಯಿತು.'

'ಆದರೆ....'

'ಏನು ಅನುಮಾನವೇ?'

'ಇಲ್ಲ ಇಲ್ಲ....ಆದರೆ ಇವತ್ತೇ ಏತಕ್ಕೆ. ನಾಳೇನೇ ಎಲ್ಲಾರೂ ಹೋಗೋಣ.'

'ಇವತ್ತಿನ ಚಿತ್ರಕ್ಕೆ ಇವತ್ತೇ ಕೊನೆಯ ದಿವಸ. ಕಲ್ಕತ್ತೆಯ 'ಇಂದೂಬಾಲಾ' ಪಾತ್ರ ವಹಿಸಿದ್ದಾಳೆ. ನಿನಗೆ ಅವಳ ಸಂಗೀತದ ಮೇಲೆ ಪ್ರೀತಿ ಆದ್ದರಿಂದ ಹೇಳಿದೆ.'

'ಆಗಲಿ ನೋಡೋಣ. ಸಾಯಂಕಾಲಕ್ಕೆ ತಾನೇ.'

'ಇಲ್ಲ. ಮಧ್ಯಾನ್ಹದ ಮೆಟನಿಗೆ.

ತಾನು ಏನು ಮಾಡಿದರೂ ಪತಿಯು ಕುಪಿತನಾಗುವುದಿಲ್ಲವೆಂಬ ಧೈರ್ಯವೊಂದು ಕಡೆ; ಒಡಹುಟ್ಟಿದವನಂತಿರುವ ರಂಗನ ಕೂಡೆ ಹೋಗಲು ಭಯವೇಕೆಂಬ ಧೈರ್ಯವೊಂದು ಕಡೆ. ಇವುಗಳಿಂದ ಹುರಿಗೊಂಡು ಲಕ್ಷ್ಮಮ್ಮ ರಂಗನಾಥನೊಂದಿಗೆ ಹೋಗಿ ಕುಳಿತಳು. ಸಂಗೀತವೇನೋ ತಲೆದೂಗಿಸಿತು. ಚಿತ್ರಕಲೆಗೆ ಬೆರಗಾದಳು. ಆದರೆ ಚಿತ್ರವನ್ನು ನೋಡುತ್ತ ನೋಡುತ್ತ ಕಣ್ಣೀರಿನ ಕಾಲುವೆ ಹರಿಸಿಬಿಟ್ಟಳು. ಮಧ್ಯದಲ್ಲಿ ಎದ್ದು ಹೋಗಲೊಪ್ಪಳು—ಆದರೆ ಚಿತ್ರವನ್ನು ನೋಡಿ ಸುಮ್ಮನೆ ಒಂದೇ ಸಮನೆ ಕಂಬನಿಗರೆವಳು.

ಚಿತ್ರ ಮುಗಿಯಿತು. ಮನೆಗೆ ಹಿಂದಿರುಗುವಾಗ ರಂಗನಾಥ ಮೆಲ್ಲನೆ

'ಇವತ್ತು ನಿನ್ನ ಇಲ್ಲಿಗೆ ನಾನು ಕರೆದುಕೊಂಡು ಬರಬಾರದಾಗಿತ್ತು. ಲಕ್ಷ್ಮೀ, ತುಂಬ ತಪ್ಪು ಮಾಡಿದೆ.'

'ಯಾಕೆ? ಯಾಕೆ ಹಾಗೆನ್ನುತ್ತೀ.'

' ಸುಮ್ಮನೆ ನಿನ್ನನ್ನು ಅಳಿಸುವುದಕ್ಕೆ ಕರೆತಂದ ಹಾಗಾಯಿತು.'

' ಛೆ! ಪಾಪ. ನೀನೇನು ಮಾಡುತ್ತಿ. ಅಳುವುದು ನನ್ನ ದೌರ್ಭಾಗ್ಯ.'

' ದೌರ್ಭಾಗ್ಯವೆಂದು ಏತಕ್ಕನ್ನುತೆ '

' ದೌರ್ಭಾಗ್ಯವಲ್ಲದೆ ಮತ್ತೇನು. ಚಿತ್ರದಲ್ಲಿ ನೋಡಿದೆಯೋ ಇಲ್ಲವೊ. ಮಕ್ಕಳಿಲ್ಲದವಳ ಬಾಳು—ಎಂದಿದ್ದರೂ ಸಾಯಿಗಿಂತಲೂ ಕಡೆ.'

ರಂಗನಾಥನ ಬಹು ದಿವಸದ ಸಮಸ್ಯೆಯು ಇಂದು ಬಗೆಹರಿದಂತಾಯಿತು. ಮುಗುಳ್ನಗೆಯೊಂದು ಮೆಲ್ಲನೆ ಅವನ ತುಟಿಗಳಿಂದ ಚಿಮ್ಮಿತು. ಉಪಚಾರೋಕ್ತಿಗಳಿಂದ ಲಕ್ಷ್ಮಮ್ಮನನ್ನು ಮನೆಗೆ ಕರೆತಂದು ಬಿಟ್ಟು ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಯೋಚನಾತರಂಗಗಳನ್ನು ನಿಗ್ರಹಿಸಲು ಯತ್ನಿಸುತ್ತಾ ಕುಳಿತುಬಿಟ್ಟ.

× × × ×

ಅನಂತಯ್ಯನ ಕಂಪೆನಿಗೆ ಆ ವರ್ಷ ತುಂಬುತ್ತ ಬಂದಿತ್ತು. ಮೇಲಿನ ಅಧಿಕಾರಿಗಳು ಲೆಖ್ಖದ ತನಿಖೆಯಲ್ಲಿ ಉದ್ಯುಕ್ತರಾಗಿದ್ದರು. ಅವರುದ್ದಕ್ಕೂ ಅನಂತಯ್ಯನು ಹೆಣಗಬೇಕಾಗಿತ್ತು. ಮನೆಗೆ ಹೋಗಲು ಬಿಡುವಿಲ್ಲ. ಊಟ ಮಾಡಲು ವ್ಯವಧಾನವಿಲ್ಲ, ನಿದ್ದೆ ಹೋಗಲು ಅವಕಾಶವಿಲ್ಲ. ಎರಡು ಮೂರು ದಿವಸಗಳು ಮನೆಗೇ ಬರುವುದಕ್ಕಾಗುತ್ತಿರಲಿಲ್ಲ. ಹಾಳು ಈ ಕೆಲಸಕ್ಕೆ ಏತಕ್ಕೆ ಸೇರಿದೆನೋ ಎಂದುಕೊಳ್ಳುವನು—ಇನ್ನು ನಾಲ್ಕೈದು ವರ್ಷ ತಾನೆ. ಅಲ್ಲಿಯ ತನಕ ಹೇಗಾದರೂ ಅನುಭವಿಸಿಬಿಡಬೇಕು ಎಂದು ಮನಸ್ಸನ್ನು ಬಿಗಿಹಿಡಿದು ಮನೆಯಕಡೆ ಚಿಂತೆಯನ್ನು ಮರೆಯಲೆತ್ನಿಸುತ್ತಿದ್ದ.

ರಂಗನಾಥ ಲಕ್ಷ್ಮಮ್ಮನ ಬೇಸರ ಕಳೆಯಲೆಂದು ಆದಷ್ಟು ಹೊತ್ತನ್ನು ಆಕೆಯೊಂದಿಗೆ ಕಳೆಯುತ್ತಿದ್ದ. ಒಂದೊಂದು ದಿನ ಉಪವನಕ್ಕೆ ಕರೆದುಕೊಂಡು ಹೋಗಿ ಬರುವನು; ಒಂದೊಂದು ದಿನ ನಾಟಕ ಅಥವಾ ಸಿನಿಮಾ. ಲಕ್ಷ್ಮಮ್ಮನೊಂದಿಗೆ ಕುಳಿತು ಸಾವಕಾಶ ವೀಳ್ಯವನ್ನು ಮೆಲ್ಲುತ್ತಾ ತಮ್ಮ ಬಾಲ್ಯವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಟ್ಟು ಆ ಕಾಲದಲ್ಲಿ ನಡೆಯುತ್ತಿದ್ದ ಚಿಕ್ಕ ಪುಟ್ಟ ಸಂಗತಿಗಳನ್ನೆಲ್ಲಾ ಅವಳ ಸ್ಮೃತಿಪಥಕ್ಕೆ ತರುವನು. ಮಧ್ಯೆ ಮಧ್ಯೆ ನಿಟ್ಟುಸಿರು ಬಿಟ್ಟು ಬಾಳಿನ ಬರಿ ಭ್ರಮೆಯ ಮೇಲೆ ವೇದಾಂತವನ್ನು

ಆಕೆಗೆ ಉಪದೇಶ ಮಾಡಿಬಿಡುವನು. ದಿನದಿನಕ್ಕೆ ಚಿತ್ರವಿಚಿತ್ರವಾಗುತ್ತಿದ್ದ ರಂಗನಾಥನ ಮನಸ್ಸಿನಲ್ಲಿ ಮೊರೆಯುತ್ತಿದ್ದ ದುಃಖ ಲಕ್ಷ್ಮಮ್ಮನಿಗೆ ಭಾಸವಾಗಲಿಲ್ಲ. ಅವಳ ಮನಸ್ಸಿನ ದುಃಖದ ಪೂರ್ಣ ಅರಿವು ಅವನಿಗಿತ್ತು. ಆದರೆ ಅದಕ್ಕೆ ಏನೂ ಚಿಕಿತ್ಸೆ ಮಾಡಲಾಗದ ಅಸಹಾಯಕತೆ ಅವನನ್ನು ಬಾಧಿಸುತ್ತಿತ್ತು.

ಒಂದು ದಿನ ಸಂಜೆ ಯಾವದೋ ಕಾದಂಬರಿಯನ್ನು ಓದುತ್ತಾ ಮಧ್ಯೆ ಮಧ್ಯೆ ಮೈಮುರಿಯುತ್ತಾ ಲಕ್ಷ್ಮಮ್ಮ ಗಂಡನ ಬರುವನ್ನು ಎದುರು ನೋಡುತ್ತ ಕುಳಿತಿದ್ದಾಳೆ. ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳಲಾಗದ ಸಂಕಟಕ್ಕೆ ಹಾಡಿಕೊಳ್ಳುವಳು. ನಾವೇರಿಯಿಂದ ಮೋಹನ, ಮೋಹನದಿಂದ ಪೂರ್ವಿ, ಪೂರ್ವಿಯಿಂದ ಅಠಾಣ, ಅಠಾಣದಿಂದ ಭೈರವಿ. ಹೀಗೆ ರಾಗಗಳು ಒಂದಕ್ಕೊಂದು ಸಂಬಂಧವಿಲ್ಲದೆ ಹರಕುಮುರುಕಾಗಿ ಗೋಳಿಡುತ್ತಾ ಅವಳ ಮಧುರಕಂಠದಿಂದ ತಲೆಹಾಕುತ್ತಿವೆ. ಅನತ್ತು ಅಸಹನೀಯವಾದ ಯಾವದೋ ಯಾತನೆಯ ಇರಿತಕ್ಕೆ ಸಿಕ್ಕಿದ ಅವಳನ್ನು ಕಂಡ ಅನಂತ ಚಿಂತಾಮುಗ್ಧನಾದ. ಭೋಜನವನ್ನು ತೀರಿಸಿಕೊಂಡು ಮತ್ತೆ ಏಳು ಗಂಟೆಗೆ ಕಲಸಕ್ಕೆ ಹೋಗಲು ಬಂದಿದ್ದ. ಮಡದಿ ಕಣ್ಣುನೋಟದಿಂದಲೇ 'ಪ್ರಿಯಾ, ಇವತ್ತು ನಿನ್ನ ಕೆಲಸವನ್ನು ಮರೆಯಲಾರೆಯಾ?' ಎಂದು ಒತ್ತಿಯೊತ್ತಿ ಪ್ರಶ್ನಿಸುತ್ತಿದ್ದಾಳೆ. ಒಂದು ಕಡೆ ಕರ್ತವ್ಯದ ಇರಿತ— ಮತ್ತೊಂದು ಕಡೆ ಪ್ರೇಮದ ಎಳೆತ. ಮನೆಯಲ್ಲಿಯೇ ಉಳಿದುಕೊಂಡು ಮಡದಿಯನ್ನು ಸಂತೈಸಲು ಮನಸ್ಸೆಷ್ಟು ಆತುರಗೊಂಡಿದ್ದರೂ ಪೂರ್ವಾಪರ ಯೋಚನೆಯ ತೂಕ ಅವನನ್ನು ಹೆಚ್ಚು ತುಯ್ಯಲು ತೊಡಗಿತು. ಮಡದಿಯನ್ನು ಮೃದೋಕ್ತಿಗಳಿಂದ ಸಂತೈಸಿ, ಈ ಒಂದು ರಾತ್ರಿಯನ್ನು ಕಳೆದುಬಿಟ್ಟರೆ ಸದ್ಯಕ್ಕೆ ತನ್ನ ಕಂಪೆನಿಯ ಲೆಖ್ಖದ ತೊಂದರೆ ಮುಗಿಯಿತೆಂದು ಹೇಳಿ ಬೀಳ್ಕೊಂಡ.

ಗಂಟೆ ಏಳಾಯಿತು....ಎಂಟಾಯಿತು....ಒಂಭತ್ತು ಹೊಡೆಯಿತು.... ಹತ್ತು ಹೊಡೆಯುವ ಸಮೀಪಕ್ಕೆ ಬಂದಿತು. ರಂಗನಾಥನಿಗೆ ಊಟ ಬಡಿಸಿ ತಾನು ಮಲಗಲು ಹೋಗಬೇಕಾಗಿತ್ತು. ಅತಿಥಿಯನ್ನು ಕಾಯುತ್ತಾ ಕುಳಿತಳು. ಸ್ವಲ್ಪ ಹೊತ್ತಿನೊಳಗಾಗಿ ಕೈಯಲ್ಲಿ ಒಂದು ಹೂಮಾಲೆ,

ಹಣ್ಣುಗಳ ಒಂದು ಕೈಗೆಂಟನ್ನು ಹಿಡಿದು ರಂಗನಾಥ ಬಂದು ವಿಳಂಬವಾದ್ದಕ್ಕೆ ಕ್ಷಮೆ ಬೇಡಿ ಎದುರಿಗಿದ್ದ ಸೋಫಾದ ಮೇಲೆ ಕುಳಿತ. ಹೂಮಾಲೆಯನ್ನೇ ದಿಟ್ಟಿಸಿ ನೋಡುತ್ತಿದ್ದ ಲಕ್ಷ್ಮಮ್ಮನ ಕುತೂಹಲವನ್ನರಿತು

'ಇವತ್ತು ನನ್ನ ಉತ್ಸವ ಲಕ್ಕೂ.'

'ಹಾಗಂದರೆ.'

'ನಮ್ಮ ಕಾಲೇಜಿನಲ್ಲಿ ನನಗೆ ಇವತ್ತು ಪಾರ್ಟಿ ಕೊಟ್ಟರು. ಅದೇ ಈ ಹೂಮಾಲೆ—ಹಣ್ಣುಗಳು.'

ಲಕ್ಷ್ಮಮ್ಮನ ಮುಖದ ಮೇಲೆ ಆನಂದ ಉಕ್ಕಿ ಹರಿಯಿತು....ಆದರೆ ರಂಗನಾಥನ ಮುಖ ದುಃಖದಿಂದ ಸುಕ್ಕಿ ಬಾಡಿತು.

'ಯಾಕೆ ಯೋಚನೆ ರಂಗೂ. ನಿನಗೆ ಪಾರ್ಟಿ ಕೊಡಬಾರದಾಗಿತ್ತೇನು ?'

'ಇಲ್ಲ. ಅಂತಹದ್ದೇನೂ ಇಲ್ಲ. ಆದರೆ ಈ ಎಲ್ಲ ವಿಜೃಂಭಣೆ ಯಾರಿಗೋಸ್ಕರ. ನನಗೆ ಗೌರವವಾದರೆ ಸುಖಪಡುವವರು ನನ್ನವರಾಗಿ ಯಾರೂ ಇಲ್ಲಾಂತ ದುಃಖ ಅಷ್ಟೆ.'

ಲಕ್ಷ್ಮಮ್ಮನಿಗೆ ಉದ್ವೇಗ ಉಕ್ಕುತ್ತಿತ್ತು. ಮುಖವೆಲ್ಲ ಕೆಂಪೇರಿ ಹಣೆಯ ಮೇಲೆ ಬೆವರ್ವನಿಗಳು ಕಾಣಿಸಿಕೊಂಡವು. ಏನನ್ನೋ ಹೇಳಲು ಎರಡು ಮೂರು ಬಾರಿ ಪ್ರಯತ್ನಿಸಿ ತಡೆತಡೆದು ಕೊನೆಗೆ ವಿಶ್ವಸಾಹಸ ಮಾಡಿ

'ಏತಕ್ಕೆ ನಾನಿಲ್ಲವೇ.'

ತಲೆಬಾಗಿ ಕುಳಿತಿದ್ದವನು ಕತ್ತೆತ್ತಿ ನೋಡಿದ. ಒಮ್ಮೆ ಮಿಂಚು ಸುಳಿದಂತೆ ನಾಲ್ಕು ಕಣ್ಣುಗಳೂ ಕೂಡಿದವು. ಇಂದೇ ಇಂತಹ ಅನುಭವ. ದೇಹಾದ್ಯಂತವೂ ಕಂಪಿಸತೊಡಗಿತು. ಹಾಗೆಯೇ ಮೆಲ್ಲನೆದ್ದು ತನ್ನ ಕೈಯಲ್ಲಿದ್ದ ಹಾರವನ್ನು ಲಕ್ಷ್ಮಮ್ಮನ ಕೊರಳಿಗೆ ಹಾಕಿದನು....ತಕ್ಷಣವೇ ಏನೋ ಒಂದು ವಿದ್ಯುದಾಲಿಂಗನವಾದ ಹಾಗಾಯಿತು.

× × × ×

ನಾಲ್ಕು ದಿವಸಗಳ ವರೆಗೆ ರಜಾ. ಇಷ್ಟು ದಿವಸ ಮಡದಿಯನ್ನು ಬಿಟ್ಟು ಬಿಟ್ಟು ಹಾಳು ಆಫೀಸಿನಲ್ಲಿ ಹೊತ್ತುಗಳೆದದ್ದಕ್ಕೆ ಪರಿಹಾರವಾಗಿ ನಾಲ್ಕು ದಿವಸಗಳೂ ಮನೆಯಲ್ಲೇ ಇದ್ದುಬಿಡುವುದು ಎಂದು ಅನಂತಯ್ಯನ

ನಿಶ್ಚಯ. ಈ ನಾಲ್ಕು ದಿವಸ ಎಲ್ಲಿ ಎಲ್ಲಿಗೆ ಹೋಗುವುದು. ನಂದಿಗೆ ಹೋಗೋಣವೇ — ಬನ್ನೇರು ಘಟ್ಟಕ್ಕೆ ಹೋಗೋಣವೇ — ಮೈಸೂರಿಗೆ ಹೋಗೋಣವೇ ಎಂದು ತನ್ನಷ್ಟಕ್ಕೆ ತಾನೇ ಎಣಿಕೆ ಹಾಕಿ ಕೊನೆಗೆ ಹೆಂಡತಿಯ ಆಲಸ್ಯವನ್ನು ಕಂಡು ಸುಮ್ಮನಾಗಿಬಿಟ್ಟ. ಲಕ್ಷ್ಮಮ್ಮನ ಪ್ರಕೃತಿ ಸ್ವಲ್ಪ ಕೆಟ್ಟಂತಿತ್ತು. ದೇಹಕ್ಕೆ ಯಾವ ಬೇನೆಯ ಬಾಧೆ ಯಿರದಿದ್ದರೂ ಮನಸ್ಸು ಉಗ್ರವಾದ, ಮಹಾವ್ಯಾಪಿಯಾದ ಯಾವದೋ ರೋಗಕ್ಕೆ ತಾಳಿ ಕಟ್ಟಿದಂತಾಗಿತ್ತು. ಅಂಗಲಾಚಿ, ಹೆಂಡತಿಯನ್ನು ಕೇಳು ವನು—ಅತ್ಯನುರಾಗದಿಂದ ‘ ಏನೂ ಇಲ್ಲ ’ ಎಂದು ಮಾರುತ್ತರ ಕೊಡದೆ ಸುಮ್ಮನಾಗಿಬಿಡುವಳು. ‘ ತನ್ನಲ್ಲಿ ಏನಾದರೂ ತಪ್ಪಾಗಿರಬಹುದೇ ’ ಎಂದು ಯೋಚಿಸುವನು. ಎಷ್ಟು ಯೋಚಿಸಿದರೂ ಬಗೆಹರಿಯದು. ರಂಗನಾಥನನ್ನು ಕೇಳಿದರೂ ಸಮಸ್ಯೆ ಪೂರ್ಣವಾಗದು. ಕರೆದೆಡೆಗೆ ಒಲ್ಲೆನೆನ್ನದೆ ಗಂಡ ನೊಂದಿಗೆ ಹೋಗುವಳು. ಆದರೆ ಚಿಂತಾರಾಜ್ಯದ ಪಟ್ಟಬಾಧ್ಯಳಂತೆ ಏನನ್ನೋ ಯೋಚಿಸುತ್ತ ಸುಮ್ಮನೆ ಕುಳಿತಿದ್ದು ಎದ್ದು ಬರುವಳು. ಕೊನೆಗೆ ಅವಳನ್ನು ವೃಥಾ ಪೀಡಿಸಿ ಪ್ರಯೋಜನವಿಲ್ಲವೆಂದು ಅನಂತ ಸುಮ್ಮನಾಗಿ ಬಿಟ್ಟ.

ಲಕ್ಷ್ಮಮ್ಮ ತನ್ನ ಜೀವಮಾನದಲ್ಲಿ ಈ ಕೆಲವು ದಿವಸಗಳಲ್ಲಿ ನಡೆದ ಘಟನೆಗಳನ್ನೆಲ್ಲಾ ಪುನರಾವಲೋಕಿಸಲಾರಂಭಿಸಿದಳು. ತನ್ನಂತಹ ಸಾಧ್ವಿ—ಸುಸಂಸ್ಕೃತಳು—ಪತಿಪ್ರೇಮಿ ಒಂದರೆಕ್ಷಣದ ಸುಖಕ್ಕಾಗಿ ಇಹ ಪರಗಳೆರಡನ್ನೂ ಮರೆತದ್ದು ಏತಕ್ಕೆ? ಜೀವನದ ಕರೆಯೋ?—ನಿಸರ್ಗದ ಸಹಜ ಲೀಲೆಯೋ?–ಅಥವಾ ನೀಚಮನೋವೃತ್ತಿಯ–ರಾಕ್ಷಸೀ ಲಾಲಸೆಯ ತಾಂಡವವೋ? ತಾನು ಮಾಡಿರುವುದು ಎಂತಹ ಘೋರ ಕೃತ್ಯ ವೆಂಬ ಅರಿವೊಂದು ಕಡೆ, ಅದನ್ನು ಮುಚ್ಚಿಕೊಂಡು ತನ್ನ ಪ್ರೇಮನಿಧಿಯ ಮುಂದೆ ಸುಳ್ಳಿನ ಬಾಳನ್ನು ಬಾಳಬೇಕಲ್ಲಾ ಎಂಬ ಮನೋವೇಧನೆಯೊಂದು ಕಡೆ. ಇವುಗಳಿಗೆ ಸಿಕ್ಕಿ ಎರಡು ಮೂರು ದಿವಸಗಳಲ್ಲಿ ಹನ್ನೆರಡು ವರ್ಷ ಕ್ಷಯವನ್ನನುಭವಿಸಿದ ರೋಗಿಯಂತಾದಳು. ತಾನು ಏತಕ್ಕಾಗಿ ಇದರಲ್ಲಿ ಪ್ರವರ್ತಿಸಿದೆ? ತನ್ನ ಜೀವನದಲ್ಲಿನ ಯಾವ ಕೊರತೆಯನ್ನು ಈ ನೀತಿ ಪತನ ತುಂಬಿಕೊಟ್ಟಿತು? ಎಂದು ಪ್ರಶ್ನೆ ಕೇಳಿಕೊಳ್ಳುವಳು. ಕೊರತೆ

ಯೇನಿತ್ತು?—ಮಕ್ಕಳಾಗಲಿಲ್ಲವಲ್ಲಾ ಎಂಬ ಒಂದು ಕೊರತೆಯನ್ನುಳಿದು! ತಕ್ಷಣವೇ ಲಕ್ಷ್ಮಮ್ಮನ ಒಡಲಿನಲ್ಲಿ ಒಂದು ಸಿಡಿಲಿನ ಕಿಡಿ ಹೊಕ್ಕಂತಾಯಿತು. ಉಗ್ರವಾದ ವೇದನೆಯಿಂದ 'ಅಮ್ಮಾ' ಎಂದು ಚೀರಿದಳು. 'ಅಯ್ಯೋ ಎಂತಹ ಕೆಲಸವನ್ನು ಮಾಡಿಬಿಟ್ಟೆ' ಎಂದು ಹಣೆ ಹಣೆ ಚಚ್ಚಿಕೊಂಡಳು. ಆದರೂ ಮನಸ್ಸಿಗೆ ಸಮಾಧಾನವಾಗದು. 'ನಾಳೆ.... ನಾನು ಗರ್ಭ ಧರಿಸಿ.... ಮಗುವಿನ ತಾಯಾಗಿ....ಅದನ್ನು ನನ್ನ ಪತಿದೇವನ ಕೈಗೆ ನಿನ್ನದೇ ಈ ಮಗುವೆಂದು ಕೊಡಲೇ' ಎಂತಹ ದೃಶ್ಯ—ಎಂತಹ ಘೋರ ಚಿತ್ರ. ಅಂತ ರಂಗ ಬಹಿರಂಗ ಶುದ್ಧನಾದ, ಪ್ರೇಮದ ಅರಸನಾದ, ತನಗಾಗಿ ನಿಸ್ಸೀಮ ತ್ಯಾಗವೃತ್ತಿಯನ್ನು ಆತ್ಮಾನಂದದಿಂದ ಅಪ್ಪಿರುವ ಪವಿತ್ರನ ಬಾಳನ್ನು ಹೊಲಸಿನಿಂದ ಕೊಳೆಯಿಸುವುದೇ? ಈ ಭಾವನೆಗಳು ಅವಳ ಹೃದಯವನ್ನು ಹಿಂಡಿಬಿಟ್ಟವು.

× × × ×

ಮಾರನೆಯ ದಿವಸವೂ ಬೆಳಗಾಯಿತು. ಎಲ್ಲರೂ ತಮ್ಮ ತಮ್ಮ ಕೆಲಸಕಾರ್ಯಗಳಲ್ಲಿ ಉದ್ಯುಕ್ತರಾದರು. ಅನಂತಯ್ಯ ಎದ್ದು ನೋಡುತ್ತಾನೆ. ಹೊಸಕಾಲದ ಹಕ್ಕಿಯಂತೆ ಸೂರ್ಯೋದಯಕ್ಕೆ ಮುನ್ನವೇ ಎದ್ದು ಮಿಯಲಿಕ್ಕೆ ನೀರು ಕಾಸಿ, ಕಾಫಿ ತಿಂಡಿ ಸಿದ್ಧಗೊಳಿಸಿ, ತನ್ನ ನಗೆಯ ಪ್ರಭೆಯಿಂದ ಸೂರ್ಯೋದಯವನ್ನು ಸೂಚಿಸುತ್ತಿದ್ದ ಲಕ್ಷ್ಮಿ ಇನ್ನೂ ಮಲಗಿಯೇ ಇದ್ದಾಳೆ. ಹತ್ತಿರ ಬಂದು ಅಕ್ಕರೆಯಿಂದ ಎಬ್ಬಿಸಿದ— ಏಳಲಿಲ್ಲ, ಅಲುಗಿಸಿದ. ತನ್ನ ಕೈಗೆ ತಣ್ಣು ತಟ್ಟಿತು. ಭೀತನಾಗಿ ರಂಗನಾಥನನ್ನು ಕರೆಯಲು ಅವನೂ ಬಂದು ಅಲಗಿಸಿ ನೋಡುತ್ತಾನೆ. ಲಕ್ಷ್ಮಿ ಮಾತ್ರ ಏಳಲಿಲ್ಲ. ಪಕ್ಕದಲ್ಲಿಯೇ ಒಂದು ಪತ್ರ ಸಿಕ್ಕಿತು.

ಪ್ರಿಯತಮಾ,

ತಮ್ಮ ಪರಿಶುದ್ಧ ಪ್ರೀತಿಗೆ ಅನರ್ಹಳು ನಾನು. ನಾನು ಮಾಡಿದ ಕರ್ಮಕ್ಕೆ ಪ್ರಾಯಶ್ಚಿತ್ತಹೊಂದಲು ನಿಮ್ಮನ್ನು ಬಿಟ್ಟುಹೋಗಿದ್ದೇನೆ. ನನ್ನನ್ನು ಮರೆತು ತಮ್ಮ ಗುಣಕ್ಕೆ ಯೋಗ್ಯಳಾದ ಒಬ್ಬ ಸಾಧ್ವಿಯ ಕೈ ಹಿಡಿದು ಸುಖವಾಗಿ ಬಾಳಿರಿ.

ನಿಮ್ಮ ಲಕ್ಷ್ಮಿ

ದುಃಖದಿಂದ, ತಲ್ಲಣದಿಂದ ಮಾತು ಹೊರಡದಾಯಿತು. 'ನನ್ನ ಲಕ್ಷ್ಮಿ ಅಪರಿಶುದ್ಧಳೇ—ತಪ್ಪಿತಸ್ಥಳೇ' ಎಂದು ಮಾತ್ರ ಒಮ್ಮೆ ಚೀರಿದ. ಅವ ನೆದುರಿಗೆ ದೊಡ್ಡದಾದ ಒಂದು ಕಗ್ಗತ್ತಲಿನ ಗುಹೆ—ಅದರ ಮುಂದೆ ಒಂದು ಪ್ರಶ್ನಾರ್ಥಕ ಚಿನ್ಹೆ—ಇವುಗಳ ಹೊರತು ಏನೂ ಕಾಣಲಿಲ್ಲ.

ರಂಗನಾಥ ಒಂದೇ ಸಮನೆ ಕಣ್ಣೀರ್ಗರೆಯುತ್ತಿದ್ದಾನೆ. ಮೂಕ ಸಹಾನುಭೂತಿಯಿಂದ ಅನಂತಯ್ಯನನ್ನು ನೋಡುತ್ತಾನೆ—ಆದರೇನು? ಎಲ್ಲೆಲ್ಲಿ ನೋಡಿದರೂ ಒಂದು ಪ್ರಶ್ನೆ-ಒಂದು ಸಮಸ್ಯೆ. ಪ್ರಶ್ನೆಗೆ ಉತ್ತರವಿಲ್ಲ. ಸಮಸ್ಯೆಗೆ ಸಮಾಧಾನವಿಲ್ಲ.

---

ರಾಮು ಹೆಚ್ಚಿಗೆ ಹೇಳಲಿಲ್ಲ. ತನ್ನ ಪತ್ನಿಯನ್ನು ಕುರಿತು ‘ಉತ್ತಮ ಗೃಹಿಣಿಯಂತೆ ವಿವೇಕದಿಂದ ನಿನ್ನ ಸಂಸಾರವನ್ನು ನೋಡಿಕೋ’ ಎಂದು ಹೇಳಿದ.

ಹೊರಡಲು ಎಲ್ಲವೂ ಸಿದ್ಧವಾಯಿತು. ಗೃಹಿಣಿಯರು ದಾರಿಪ್ರಯಾಣಕ್ಕಾಗಿ ರೊಟ್ಟಿಗಳನ್ನು ಬೇಯಿಸಿ, ಜೋಳಿಗೆಗಳಿಗೆ ಹಾಕಿಕೊಟ್ಟರು. ಇಬ್ಬರು ಯಾತ್ರಿಕರು ಒಂದೊಂದು ಕಂಬಳಿಗಳನ್ನು ತೆಗೆದುಕೊಂಡು ರೊಟ್ಟಿಯ ಜೋಳಿಗೆಗಳನ್ನು ಹೆಗಲಿಗೆ ಹಾಕಿಕೊಂಡು ಹೊರಟರು. ರಾಮು ನಿಶ್ಚಿಂತನಾಗಿ ಹೊರಟ. ಆತನಿಗೆ ಮನಸ್ಸಿನಲ್ಲಿ ಯಾವ ಆಶೆ ಆತಂಕ ಇರಲಿಲ್ಲ. ಆತನಿಗಿದ್ದ ಆಶೆ ಯಾವುದೆಂದರೆ ತನ್ನ ಮಿತ್ರನಿಗೆ ಹರ್ಷವನ್ನುಂಟುಮಾಡುವುದು, ಮತ್ತು ಎಲ್ಲರಲ್ಲಿಯೂ ಸವಿನಯದಿಂದ ವರ್ತಿಸುವುದು. ದಾರಿಯಲ್ಲಿ ಹೋಗುತ್ತಾ ಪರಮಾತ್ಮನ ದಿವ್ಯ ನಾಮಸುಧೆಯನ್ನು ಸವಿಯುತ್ತಾ ಯಾರಾದರೂ ಸಿಕ್ಕಿದರೆ ಮೃದುಭಾಷೆಗಳನ್ನಾಡಿ ಅವರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಾ ಸಂತೋಷವಾಗಿ ಹೊರಟ. ಇಷ್ಟು ಸದ್ಗುಣಪೂರಿತನಾದರೂ ನಶ್ಯ ಹಾಕುವದೊಂದನ್ನು ಬಿಟ್ಟಿರಲಿಲ್ಲ. ಬಿಡಲು ಪ್ರಯತ್ನಿಸಿದ. ಅದಕ್ಕೆ ಯಾತ್ರೆಗೆ ಹೊರಡುವಾಗ ಡಬ್ಬಿಯನ್ನು ಬೇಕೆಂತಲೇ ಮರೆತು ಬಿಟ್ಟು ಬಂದ. ಆದರೆ ಅದಿಲ್ಲದೆ ಇರಲಾಗದೆ ದಾರಿಗನೊಬ್ಬನ ಹತ್ತಿರ ಸ್ವಲ್ಪ ತೆಗೆದುಕೊಂಡಿಟ್ಟ.

ರಹೀಮ ಏನೋ ಚಿಂತಿಸುತ್ತಲೇ ಹೊರಟ. ಮನದಲ್ಲಿ ಸ್ವಾಸ್ಥ್ಯವಿರಲಿಲ್ಲ. ಮೋಡ ಕವಿದಂತಿತ್ತು. ವ್ಯಾಮೋಹ ಆತನನ್ನು ಬಿಟ್ಟಿರಲಿಲ್ಲ. ಮನೆಯ ಕಡೆ ಏನಾಗಿದೆಯೋ ಎಂದು ಚಿಂತಿಸುತ್ತಲಿದ್ದ. ಕುಡುಕ ಮಗನೇನು ಮಾಡಿರುತ್ತಾನೆಯೋ? ತಾನು ಹೇಳಿದ್ದನ್ನೆಲ್ಲಾ ಜ್ಞಾಪಕದಲ್ಲಿಟ್ಟುಕೊಂಡು ಆಜ್ಞೆಯನ್ನು ಸರಿಯಾಗಿ ನೆರವೇರಿಸುತ್ತಾನೋ ಮರೆತುಬಿಡುತ್ತಾನೋ? ಈ ಪರಿಯ ಸಂದೇಹವೇ ಬಾಧಿಸತೊಡಗಿತು. ದಾರಿಯಲ್ಲಿ ಒಬ್ಬರೊಡನೆಯೂ ಮಾತನಾಡದೆ ತನ್ನ ದಾರಿಯನ್ನೇ ನೋಡುತ್ತ ಹೊರಟ. ಅತ್ತಿತ್ತ ತಿರುಗಲೊಲ್ಲ. ಅಂತೂ ಖಂಡಿತವಾಗಿ ರಾಮುನಲ್ಲಿದ್ದ ಹರ್ಷ ಆತನಲ್ಲಿದ್ದಿಲ್ಲ!

೪

ಐದು ವಾರಗಳು ಕಳೆದುಹೋದವು. ಯಾತ್ರಿಕರಿಬ್ಬರೂ ಪ್ರಯಾಣ ಮಾಡುತ್ತಾ ಅನೇಕ ದೇಶಗಳನ್ನು ಕಂಡರು. ಒಂದು ದೇಶಕ್ಕೆ ಬಂದಾಗ ಅಲ್ಲಿ ಸುಭಿಕ್ಷತೆಯನ್ನು ಕಂಡರು. ಅಲ್ಲಿನ ಜನಗಳೆಲ್ಲಾ ಯಾತ್ರಿಕರನ್ನು ಆದರಿಸಿದರು. ಮುಂದೆ ಹೋಗುತ್ತಾ ಕ್ಷಾಮಪೀಡಿತವಾದೊಂದು ದೇಶಕ್ಕೆ ಬಂದರು. ಇಲ್ಲಿ ಆಹಾರವೇ ದೊರಕುತ್ತಿರಲಿಲ್ಲ. ಹಣ ಕೊಡುತ್ತೇನೆಂದರೂ ಸಾಮಗ್ರಿಗಳೇ ದೊರಕಲೊಲ್ಲವು. ಕ್ಷಾಮದಿಂದ ಜನಗಳು ಇರುವೆ ನೊಣ ಗಳಂತೆ ಸಾಯುತ್ತಿದ್ದುದನ್ನು ಕಂಡರು. ಆ ದೇಶದಲ್ಲಿ ಹೋದ ವರ್ಷ ಮಳೆ ಸಂಪೂರ್ಣವಾಗಿ ಹೋಗಿ ಬೆಳೆಯೇ ಆಗಿರಲಿಲ್ಲ. ಮರುಭೂಮಿ ಯಂತೆ ಆಗಿತ್ತು. ಆ ಸಮಯದಲ್ಲಿ ಜನ ದುಡ್ಡಿನಾಸೆಗೋಸ್ಕರ ಇದ್ದ ಅಲ್ಪ ಸ್ವಲ್ಪವನ್ನೂ ಮಾರಿಕೊಂಡಿದ್ದರು. ಹಣಗಾರರು ಆ ಪ್ರದೇಶವನ್ನೇ ಬಿಟ್ಟು ಸುಭಿಕ್ಷ ದೇಶಗಳಿಗೆ ಓಡಿಹೋಗಿದ್ದರು.

ರಾತ್ರಿಯನ್ನು ಒಂದು ಹಳ್ಳಿಯಲ್ಲಿ ಕಳೆದು, ಬೆಳಗ್ಗೆ ಹೊತ್ತಿಗೆ ಯಾತ್ರಿಕರು ಸ್ವಲ್ಪ ರೊಟ್ಟಿಗಳನ್ನು ಹಳ್ಳಿಯಲ್ಲೇ ಯಾರ ಕೈಯಲ್ಲಿಯೋ ಮಾಡಿಸಿ ತೆಗೆದುಕೊಂಡು ಹೊರಟರು. ಏಳು ಮೈಲಿಗಳು ನಡೆದರು; ಅಷ್ಟುಹೊತ್ತಿಗೆ ಬಿಸಿಲು ಹತ್ತಿತ್ತು. ಸ್ವಲ್ಪ ವಿಶ್ರಮಿಸಿಕೊಳ್ಳೋಣವೆಂದು ಒಂದು ಕೊಳದ ಹತ್ತಿರ ಬಂದು ಕುಳಿತರು. ಮೆಲ್ಲಮೆಲ್ಲನೆ ರೊಟ್ಟಿಗಳನ್ನು ಬಿಚ್ಚಿ ತಿನ್ನಲಾರಂಭಿಸಿದರು. ಆಹಾರವನ್ನು ಮುಗಿಸಿಕೊಂಡು ಸ್ವಲ್ಪ ಸ್ವಲ್ಪ ನೀರನ್ನು ಕುಡಿದು ಕುಳಿತರು. ರಾಮು ತನ್ನ ನಶ್ಯದ ಡಬ್ಬಿಯನ್ನು ತೆಗೆದ.

ಅದನ್ನು ನೋಡಿ ರಹೀಮು:—ಆ ದುರಭ್ಯಾಸ ಏಕಯ್ಯಾ ಬಿಡಲೊಲ್ಲೆ ?

ರಾಮು:—ಆಗೋದಿಲ್ಲಪ್ಪಾ, ಆಗಲ್ಲ. ಏನೇನೋ ಪ್ರಯತ್ನಮಾಡಿದೆ, ಸಾಧ್ಯವಿಲ್ಲ. ಕಲಿತ ಬುದ್ಧಿಯನ್ನು ಬಿಡುವುದು ಅಸಾಧ್ಯ.

ಯಾತ್ರಿಕರಿಬ್ಬರೂ ಎದ್ದು ಹೊರಡಲಾರಂಭಿಸಿದರು. ಮತ್ತೆ ಏಳು ಮೈಲಿಗಳು ನಡೆದರು. ಅಷ್ಟು ಹೊತ್ತಿಗೆ ರಾಮುನಿಗೆ ನೀರಡಿಕೆಯಾಯಿತು.

ರಹೀಮು ರಾಮುನಿಗಿಂತ ಶಕ್ತ. ಆದ್ದರಿಂದ ಅವನು ಒಂದೇ ಸಮನೆ ಹೆಜ್ಜೆ ಹಾಕುತ್ತಾ ಆಯಾಸಪಡದೆ ನಡೆಯುತ್ತಿದ್ದ.

ರಾಮು:—ಅಯ್ಯಾ, ನನಗೆ ಬಾಯಾರಿಕೆ, ಸ್ವಲ್ಪ ನೀರು ಕುಡಿದು ಬರುವೆ. ಇರಯ್ಯಾ.

ರಹೀಮು:—ನೀನು ಹೋಗು, ನನಗೆ ನೀರಡಿಕೆಯಿಲ್ಲ.

ರಾಮು:—ನನಗೆ ಕಾಯಬೇಡ, ಮೆಲ್ಲಗೆ ಹೋಗುತ್ತಿರು. ಅಲ್ಲಿ ಕಾಣುವ ಗುಡಿಸಲಿಗೆ ಹೋಗಿ ನೀರು ಕುಡಿದು ಓಡಿಬಂದು ನಿನ್ನನ್ನು ಸೇರುವೆ.

ಹೀಗೆ ಹೇಳಿ, ರಾಮು ಗುಡಿಸಲಿನ ಕಡೆಗೆ ಹೊರಟ. ಆ ಗುಡಿಸಲು ಜೀರ್ಣವಾಗಿ ಹೋಗಿತ್ತು. ಒಳಗೆ ಹೋದರೆ ತಲೆಯ ಮೇಲೆ ಚಾವಣಿ ಯೆಲ್ಲಿ ಬೀಳುವುದೋ ಎಂದೆನಿಸುತ್ತಿತ್ತು. ಅದನ್ನು ನೋಡಿದೊಡನೆಯೇ ಇಲ್ಲಿ ಯಾರೂ ಇರಲಾರರು ಎಂದಂದುಕೊಂಡ. ಆಗಲಿ, ನೋಡುವೆನು ಎಂದು ಬಾಗಿಲು ತಟ್ಟಿದ. ಪುನಃ ತಟ್ಟಿದ. ಹೀಗೆ ಎಷ್ಟು ಸಲ ತಟ್ಟಿದರೂ ಉತ್ತರವೇ ಇಲ್ಲ. ಕಡೆಗೆ ಬಾಗಿಲಿಗೆ ಕಿವಿಗೊಟ್ಟು ಆಲೈಸಿ ಕೇಳಿದ. ಒಂದು ಮಗುವಿನ ಅಳುವಿನ ಧ್ವನಿ ಕೇಳಿಬಂತು. ಆಗಲಿ! ಯಾರೋ ಏಳಲಾರದಿದ್ದಾರೆ ಎಂದಂದುಕೊಂಡು ಬಾಗಿಲನ್ನು ನೂಕಲು ಅದು ದಾರಿ ಬಿಟ್ಟಿತು. ಒಳಗೆ ಪ್ರವೇಶಮಾಡಿದ.

೪

ಒಳಗೆ ನೋಡಲು ಎಲ್ಲವೂ ಕತ್ತಲಾಗಿತ್ತು. ಅದರ ಒಳಗೆ ಒಂದು ಕೊಠಡಿಯಿದ್ದಂತಿತ್ತು. ಕೊಠಡಿಯಲ್ಲಿ ಒಂದು ಸಣ್ಣ ಹಣತೆ ಉರಿಯು ತ್ತಿತ್ತು. ಒಬ್ಬ ಹೆಂಗಸು ಮಲಗಿದ್ದಳು. ಅವಳ ಮುಂದೆ ಹೊಟ್ಟೆಯೂದಿಸಿ ಕೊಂಡಿರುವ ಒಬ್ಬ ಬಾಲಕ: 'ಅಮ್ಮಾ, ಹಸಿವು' ಎಂದಳುತ್ತಾ ನಿಂತಿದ್ದ. ರಾಮು ಆ ಕೊಠಡಿಯನ್ನು ಪ್ರವೇಶಿಸಿದ. ಅದು ಬಹಳ ಅಸಹ್ಯವನ್ನುಂಟು ಮಾಡುವ ನೋಟವಾಗಿತ್ತು. ಆ ಕೊಠಡಿಯ ಇನ್ನೊಂದು ಮೂಲೆ ಯಲ್ಲಿ ಕಾಲು ಮುದುರಿಕೊಂಡು ಬಿದ್ದಿರುವ ಮತ್ತೊಬ್ಬ ಹೆಂಗಸನ್ನು ಕಂಡ. ಅವಳೂ ರೋಗಿ ಇರಬಹುದೆಂದು ಭಾವಿಸಿದ. ರಾಮು ಪ್ರವೇಶಿಸಿದ್ದನ್ನು ಕಂಡು ಮೊದಲನೆಯ ಹೆಂಗಸು:—

ಯಾರದು ? ನಿನಗೇನು ಬೇಕು ಎಂದಳು.

ರಾಮು :—ಅಮ್ಮಾ; ಸ್ವಲ್ಪ ನೀರು ಬೇಕು. ಬಹಳ ಬಾಯಾರಿಕೆ.

ಹೆಂಗಸು :—ನೀರೂ ಇಲ್ಲ ಗೀರೂ ಇಲ್ಲ. ಹೋಗಯ್ಯಾ, ನಾವೇ ಸಾಯುತ್ತಾ ಬಿದ್ದಿದ್ದೇವೆ, ನಿಮಗೆ ನೀರನ್ನೊದಗಿಸುವವರಾರನ್ನು ತರಲಿ ?

ರಾಮು :—ಅಮ್ಮಾ , ಇದೇನು ಹೀಗೆ ಹೇಳುವೆ ? ನಿಮ್ಮನ್ನು ನೋಡಿ ಕೊಳ್ಳುವುದಕ್ಕೆ ಯಾರೂ ಇಲ್ಲವೇ ?

ಹೆಂಗಸು :—ಯಾರೂ ಇಲ್ಲ. ನಮ್ಮ ಯಜಮಾನ ಸಾಯುತ್ತಾ ಹೊರಗೆ ಬಿದ್ದಿದ್ದಾನೆ.

ಹೊಸ ವ್ಯಕ್ತಿ ಪ್ರವೇಶವಾದದ್ದನ್ನು ಕಂಡು ಸುಮ್ಮನಿದ್ದ ಮಗು ಪುನಃ ತಾಯಿಯ ಸೆರಗನ್ನು ಹಿಡಿದು, 'ಅಮ್ಮಾ, ತಿಂಡಿ, ಹಸಿವಮ್ಮಾ' ಎಂದಿತು. ರಾಮು ಆ ಹೆಂಗಸನ್ನು ಇನ್ನೂ ಪ್ರಶ್ನೆ ಮಾಡುವುದರಲ್ಲಿದ್ದ. ಆಗ ಆಕೆಯ ಯಜಮಾನ ಬಂದ. ಬಂದು ನಿಶ್ಶಕ್ತತೆಯಿಂದ ಬಿದ್ದು ಬಿಟ್ಟ. ಈ ದೃಶ್ಯಗಳನ್ನೆಲ್ಲಾ ನೋಡಿ, ರಾಮುನಿಗೆ ಬಹಳ ದುಃಖವುಂಟಾ ಯಿತು. ಆಗ ಬಂದವನು ರಾಮುನನ್ನು ನೋಡಿ, 'ಯಾರು ? ನೀನು ಯಾರ........ಪ್ಪಾ. ಅಲ್ಲಿ ನೋಡು, ಸಾಯುತ್ತಾ ಬಿದ್ದಿದ್ದಾಳೆ ಮಗು. ಮಗುವಿಗೆ ಆಹಾರವಿಲ್ಲ' ಎಂದ.

ರಾಮು ಕುಳಿತ. ತನ್ನ ಚೀಲವನ್ನು ಬಿಚ್ಚಿ ಉಳಿದಿದ್ದ ರೊಟ್ಟಿಗಳಲ್ಲಿ ಆತನಿಗೆ ಒಂದನ್ನೂ, ಹೆಂಗಸರಿಗೆ ಒಂದೊಂದನ್ನೂ, ಮಗುವಿಗೆ ಅರ್ಧವನ್ನೂ ಕೊಟ್ಟ. ಆಗ ಆ ಸ್ತ್ರೀ 'ಅಪ್ಪಾ, ನಮ್ಮ ಭಾಗದ ದೇವರೇ, ಸ್ವಲ್ಪ ನೀರು ತರುತ್ತೀಯಾ' ಎಂದಳು.

ರಾಮು :—ಅಮ್ಮಾ, ನೀರು ಎಲ್ಲಿದೆ ?

ಹೆಂಗಸು :—(ಬಿಂದಿಗೆ ಹಗ್ಗದ ಕಡೆಗೆ ತೋರಿಸಿ) ಅದನ್ನು ತೆಗೆದು ಕೊಂಡು ಮನೆಯ ಹಿಂದೆ ಭಾವಿ ಇದೆ, ನೀರು ತೆಗೆದುಕೊಂಡು ಬಾ.

ಅದರಂತೆಯೇ ರಾಮು ಬಿಂದಿಗೆಯನ್ನು ತೆಗೆದುಕೊಂಡು ಹೋಗಿ ನೀರು ತಂದು ಎಲ್ಲರಿಗೂ ಕೊಟ್ಟ. ಎಲ್ಲರಿಗೂ ಸ್ವಲ್ಪ ಚೇತನವುಂಟಾ

ಯಿತು. ರಾಮ ಊರೊಳಕ್ಕೆ ಹೋಗಿ ಆಹಾರಸಾಮಗ್ರಿಗಳನ್ನು ತಂದ. ಕಟ್ಟಿಗೆಯೊಡೆದು, ಒಲೆ ಹಚ್ಚಿ ಅನ್ನ ಸಾರು ಮಾಡಿ ಬಿಸಿಬಿಸಿಯಾಗಿ ಬಡಿಸಿದ.

೫

ಎಲ್ಲರೂ ತಿಂದರು ; ಮಕ್ಕಳು ಪಾತ್ರೆಗಳನ್ನು ಶುಭ್ರವಾಗಿ ನೆಕ್ಕಿಬಿಟ್ಟರು. ಎಲ್ಲರೂ ಹರ್ಷದಿಂದ ಮಲಗಿದರು. ಮಕ್ಕಳಿಗಂತೂ ಪರಮಾನಂದ. ಆ ಹೆಂಗಸು ಈ ಗತಿ ಏತಕ್ಕುಂಟಾಯಿತೆಂಬ ವಿಚಾರ ಹೀಗೆ ಹೇಳಿದಳು: 'ಆಪದ್ಬಂಧು, ನಾವು ಯಾವಾಗಲೂ ಸಾಹುಕಾರರಾಗಿರಲಿಲ್ಲ. ಹೋದ ವರ್ಷವಂತೂ ಒಂದು ಕಾಳೂ ದವಸವೂ ಆಗಲಿಲ್ಲ. ಇದ್ದದ್ದನ್ನು ತಿಂದು ಮುಗಿಸಿದೆವು. ಭಿಕ್ಷಕ್ಕೆ ಹೋಗಲು ಮನಸ್ಸು ಬರಲಿಲ್ಲ—ಸಾಲ ತೆಗೆದು ಕೊಂಡು ಬಂದು ತಿನ್ನುತ್ತಿದ್ದೆವು. ಆದರೆ ಎಷ್ಟು ದಿನ ಸಾಲ ದೊರಕೀತು? ಸಾಲವೂ ದೊರೆಯದಂತಾಯಿತು. ಆ ಸಮಯಕ್ಕೆ ಸರಿಯಾಗಿ ನನ್ನ ತಂಗಿ— ಆ ಮೂದೇವಿ ಖಾಯಿಲೆಬಿದ್ದಳು. ಹೊಟ್ಟೆಗೇನೂ ಇಲ್ಲ. ಕೆಲವು ದಿನ ಹುಲ್ಲು ತಿಂದೆವು. ಕಡೆಗೆ ಉಪವಾಸವ್ರತವನ್ನೂ ಆಚರಿಸಲಾರಂಭಿಸಿದೆವು.'

ಕಥೆಯನ್ನು ಕೇಳಿ ಎಲ್ಲರೂ ನಿದ್ರಿಸಿದರು. ಎಲ್ಲರಿಗೂ ಚೆನ್ನಾಗಿ ನಿದ್ದೆ ಬಂತು. ಬೆಳಗಾಗಲು ರಾಮ ಮೊದಲೆದ್ದು ನೀರನ್ನು ಕಾಸಿಟ್ಟ. ಎಲ್ಲರೂ ಎದ್ದು, ಮುಖ ತೊಳೆದುಕೊಂಡರು. ಹುಡುಗರು ರಾಮನನ್ನು ಕಂಡು, 'ತಾತ, ತಿಂಡಿ' ಎಂದರು. ರಾಮನು ಉಳಿದಿದ್ದ ರೊಟ್ಟಿಗಳಲ್ಲಿ ಒಂದೊಂದನ್ನು ಕೊಟ್ಟ. ಈ ಸಂಸಾರವನ್ನು ನೆಟ್ಟಗೆ ಮಾಡಿ ಅನಂತರ ತನ್ನ ಯಾತ್ರೆಗೆ ಹೊರಡುವುದು ತನ್ನ ಕರ್ತವ್ಯವೆಂದರಿತು, ಆ ಊರಿನ ಸಾಹುಕಾರ ರೈತನ ಬಳಿಗೆ ಹೋಗಿ, ಹಾಲಿಗೋಸ್ಕರ ಒಂದು ಹಸುವನ್ನೂ, ಒಂದು ಜೊತೆ ಎತ್ತನ್ನೂ ಕೊಂಡು ತಂದ. ಊರೊಳಕ್ಕೆ ಹೋಗಿ, ೧೫ ದಿವಸಗಳಿಗೆ ಬೇಕಾಗುವಷ್ಟು ಮನೆಗೆ ಸಾಮಾನನ್ನೂ ತಂದ.

ಕೆಲವು ದಿವಸಗಳೊಳಗಾಗಿ ಎಲ್ಲರೂ ಚೇತರಿಸಿಕೊಂಡರು. ಮನೆ ಯಜಮಾನನೂ ಮೊದಲಿನ ಹಾಗೆಯೇ ಆದ. ಆತನಿಗೂ ಶಕ್ತಿ ಬಂತು. ರಾಮ ಆತನಿಗೆ ಹೊಲವನ್ನು ಉಳ ಹೇಳಿ ಎತ್ತುಗಳನ್ನು ಕೊಟ್ಟುದಲ್ಲದೆ, ಇಪ್ಪತ್ತು ರೂಪಾಯಿಗಳನ್ನೂ ಕೊಟ್ಟನು. ಇಲ್ಲಿ ತನ್ನ ಕೆಲಸವಾಯಿತೆಂದು

ಕೊಂಡು ರಾತ್ರಿ ಎಲ್ಲರೂ ಮಲಗಿರಲು, ತನ್ನ ಎಕ್ಕಡವನ್ನು ಮೆಟ್ಟಿಕೊಂಡು ರಹೀಮುನನ್ನು ಹುಡುಕಲು ಹೊರಟನು.

೬

ರಾಮು ಮೂರು ಮೈಲಿಗಳು ನಡೆದ. ಆಗಲೇ ಬೆಳಗಾಗುತ್ತ ಬಂದಿತು. ಒಂದು ಮರದ ಕೆಳಗೆ ಕುಳಿತು, ತನ್ನಲ್ಲಿದ್ದ ಹಣವನ್ನೆಣಿಸಲು ೧೯೫ ರೂಪಾಯಿಗಳಿದ್ದುವು. ಓಹೋ! ಈ ಹಣದಲ್ಲಿ ಜೆರೊಸಲೇಮ್ ಪಟ್ಟಣವನ್ನು ನಾನು ಸೇರಲಾರೆ. ಭಿಕ್ಷೆಯೆತ್ತುವುದು ಮಹಾ ಪಾಪಕರ. ಹೋಗಲಿ. ಮುಖ್ಯ ಪರಮಾತ್ಮನ ದಿವ್ಯ ದರ್ಶನವನ್ನು ಮಾಡುವ ಪುಣ್ಯ ನನಗಿಲ್ಲ. ರಹೀಮುನಂತೂ ಹೋಗಿಯೇ ಇರುತ್ತಾನೆ. ಆತನು ನನ್ನ ಹೆಸರಿನಲ್ಲಿ ಸೇವೆ ನಡೆಸಿರುತ್ತಾನೆ. ಪರಮಾತ್ಮ ಮಹಾ ದಯಾನಿಧಿ. ಆತ ನನ್ನನ್ನು ಕ್ಷಮಿಸುತ್ತಾನೆ. ಎನ್ನುತ್ತಾ ಹಿಂತಿರುಗಿ ನೇರವಾಗಿ ಸ್ವಗ್ರಾಮಕ್ಕೆ ಬಂದ. ಬರುವ ಪ್ರಯಾಣ ಆತನಿಗೆ ಬಹು ಕಷ್ಟಕರ ವಾಯಿತು. ಹೋಗುವಾಗ ಉತ್ಸಾಹವಿತ್ತು, ಜತೆಯಿತ್ತು. ಆದ್ದರಿಂದ ಆಯಾಸವಾಗಲಿಲ್ಲ. ಈಗಲಾದರೂ ಎರಡೂ ಇಲ್ಲ. ಹಾಗೂ ಹೀಗೂ ಕಷ್ಟಪಟ್ಟುಕೊಂಡು ಮನೆಯನ್ನು ಸೇರಿದ.

ಊರಿಗೆ ಬಂದು ನೋಡಲು ಧಾನ್ಯವೆಲ್ಲಾ ಕುಯಿಲಿಗೆ ಬಂದಿತ್ತು. ತಮ್ಮ ಮನೆಮುದುಕ ಸುರಕ್ಷಿತವಾಗಿ ಬಂದನೆಂದು ಮನೆಯವರೆಲ್ಲಾ ಸಂತೋಷ ಗೊಂಡರು. ಮನೆಯವರೆಲ್ಲಾ ಆಸಕ್ತಿಯಿಂದ ಪ್ರಯಾಣ ಹೇಗಿತ್ತು? ಅಲ್ಲೇನೇನು ಇತ್ತು ಎಂದು ಕೇಳಲು, ರಾಮುನು: 'ಇಲ್ಲಾ, ನಾನು ಜೆರೊಸಲೇಮಿಗೆ ಹೋಗಲಿಲ್ಲ. ಪರಮಾತ್ಮನ ಇಚ್ಛೆ ಆ ರೀತಿಯಿರಲಿಲ್ಲ. ಇದ್ದ ಹಣದ ಅರ್ಧ ದಾರಿಯಲ್ಲೆ ವೆಚ್ಚವಾಗಿಹೋಯಿತು. ಹೋಗಲಾಗ ಲಿಲ್ಲ'ವೆಂದ.

ರಾಮುನು ಬಂದದ್ದು ರಹೀಮನ ಮನೆಯವರಿಗೂ ತಿಳಿಯಿತು. ಅವರಿಗೂ ಅದೇ ಉತ್ತರವನ್ನು ಹೇಳಿ ಕಳುಹಿಸಿದ. ಎಲ್ಲರಿಗೂ ಪರ ಮಾಶ್ಚರ್ಯವಾಯಿತು! 'ರಾಮುನಂತಹ ವಿವೇಕಿ ಪ್ರಯಾಣ ಹೊರಟು, ಅದನ್ನು ಮುಗಿಸದೆ, ಅರ್ಧದಲ್ಲೇ ಓಡಿಬಂದಿರುವನಲ್ಲಾ!' ಎಂದು.

ಯಥಾಪ್ರಕಾರ ತನ್ನ ನೇಗಿಲಿಗೆ ಕೈಹಚ್ಚಿದ. ಎಂದಿನಂತೆ ತನ್ನ ಗೃಹಕೃತ್ಯವನ್ನು ನಡೆಸುತ್ತಿದ್ದ.

೭

ರಹೀಮನ ಗತಿಯೇನಾಯಿತೋ ಸ್ವಲ್ಪ ವಿಚಾರಿಸೋಣ. ರಾಮು ಉಪವಾಸಿಗಳಾದ ರೈತರ ಮನೆಯಲ್ಲಿ ಕಳೆದ ದಿನವೆಲ್ಲಾ ರಹೀಮು, ಅವನಿಗಾಗಿ ಕಾದು ಕಾದು ಬೇಸತ್ತ. ಸ್ವಲ್ಪ ದೂರ ಹೋಗುವುದು, 'ಇನ್ನೇನು ಬರುವನು' ಎಂದು ಕುಳಿತುಕೊಳ್ಳುವುದು. ಸುತ್ತಲೂ ನೋಡುವುದು. ರಾಮು ಹೋಗದ ದಾರಿಯನ್ನೇ ಕಣ್ಣು ನೋವು ಬರುವ ವರೆಗೂ ನೋಡಿದ. ಪುನಃ ಕುಳಿತ. ಈ ಸಲ ಸ್ವಲ್ಪ ಆಲೋಚಿಸಿದ. 'ಓಹೋ! ಅವನೆಲ್ಲೋ ನನಗಿಂತ ಮುಂದೆ ಹೋಗಿರಬಹುದು; ಇಲ್ಲ ಯಾರೋ ಅವನನ್ನು ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಹೋಗಿರಬಹುದು' ಎಂದು ಭಾವಿಸಿದ.

ಅದರಂತೆಯೇ ತನ್ನ ದಾರಿಯನ್ನೇ ನೋಡುತ್ತಾ ಪ್ರಯಾಣವನ್ನು ಪುನಃ ಮೊದಲುಮಾಡಿದ. ಹೋಗುತ್ತ ಒಂದು ಹಳ್ಳಿಗೆ ಬಂದ. ಆ ಹಳ್ಳಿಯ ಪಟೇಲ ಸಿಕ್ಕಲು, 'ಅಯ್ಯಾ, ಪಟ್ಟೆತಲೆಯ ಕುಳ್ಳನೆಯ ವೃದ್ಧನೊಬ್ಬ ಈ ಮಾರ್ಗವಾಗಿ ಹೋದನೇ?' ಎಂದು ಕೇಳಲು, ಸಮಂಜಸವಾದ ಉತ್ತರ ಬರಲಿಲ್ಲ.

ಅವನೆಲ್ಲೋ ನನಗಿಂತ ಮುಂದೆ ಹೋಗಿದ್ದಾನೆ. ಇರಲಿ, ಅವನನ್ನು ಹಡಗಿನಲ್ಲಾದರೂ ಕಾಣುವೆ. ಎಂದು ಧೈರ್ಯ ಮಾಡಿಕೊಂಡ.

ಇವನ ಜತೆಗೆ ಮತ್ತೊಬ್ಬ ಯಾತ್ರಿಕ ಸಿಕ್ಕಿದ. ಇಬ್ಬರೂ ಹಡಗು ಹತ್ತಿದರು. ಸುರಕ್ಷಿತವಾಗಿ ಜೆರೂಸಲೇಮಿಗೆ ಬಂದು ಸೇರಿದರು. ಆ ದಿನ, ಬಹಳಾಯಾಸವಾಗಿದ್ದುದರಿಂದ ಯಾವ ಸ್ಥಳವನ್ನೂ ನೋಡಲು ಹೋಗದೆ, ಸ್ವಲ್ಪ ಆಹಾರವನ್ನು ತೆಗೆದುಕೊಂಡು ಮಲಗಿದ. ಮಾರನೆಯ ದಿನವೆದ್ದು ಮಜ್ಜನಾದಿಗಳನ್ನು ತೀರಿಸಿಕೊಂಡು ನೋಡಲು ಹೊರಟರು. ಕ್ರೈಸ್ತರ, ಮಹಮ್ಮದೀಯರ ಪುಣ್ಯಸ್ಥಳಗಳನ್ನೆಲ್ಲಾ ನೋಡಿದರು. ಒಂದು ಮಸೀದಿಯಲ್ಲಿ ರಹೀಮು ದೀಪವನ್ನು ಹಚ್ಚಿಸಿದ. ನೋಟವನ್ನೆಲ್ಲಾ ತೀರಿಸಿಕೊಂಡು ತಾವಿಳಿದುಕೊಂಡಿದ್ದ ಜಾಗಕ್ಕೆ ಬಂದು ಮಲಗಿದರು. ಸ್ವಲ್ಪ ಹೊತ್ತಾದ ಮೇಲೆ ರಹೀಮನಿಗೆ ಗಂಟುಬಿದ್ದಿದ್ದ ಯಾತ್ರಿಕ ಹಣ ಕಳವಾಯಿತೆಂದು

ಗೊಂದಲ ಹಚ್ಚಿದ. ಇದು ರಹೀಮನಿಗೆ ಬಹಳ ವ್ಯಸನವುಂಟುಮಾಡಿತು. ಏತಕ್ಕೆಂದರೆ ರಹೀಮನಿಗೆ ಗಂಟುಬಿದ್ದಿದ್ದ ಯಾತ್ರಿಕನಲ್ಲಿ ಒಂದು ಕಾಸೂ ಇರಲಿಲ್ಲ. ಆದುವರೆಗೆ ನೋಟ ಊಟ ಇತ್ಯಾದಿಗಳ ಖರ್ಚನ್ನು ರಹೀಮನೇ ವಹಿಸಿದ್ದ.

೮

ತನ್ನ ಬೆನ್ನುಹಿಡಿದಿದ್ದ ಯಾತ್ರಿಕ ದುರ್ಜನತೆಯವನೆಂಬ ಭಾವನೆ ರಹೀಮನಿಗೆ ಬಂದಿತು. ಆದರೂ ಜತೆಯವನನ್ನು ಒಬ್ಬನೇ ಹೋಗು ಎನ್ನುವುದು ತರವಲ್ಲವೆಂಬ ಭಾವನೆಯಿಂದ ಸುಮ್ಮನಿದ್ದ. ಮಾರನೆಯ ದಿನ ಯಥಾವಿಧಿಯಾಗಿ ಒಂದು ದೇವಾಲಯ ನೋಡಹೋದ. ಆ ದೇವಾಲಯ ದಲ್ಲಿ ರಹೀಮ ದೀಪಾರಾಧನೆ ಮಾಡಿಸಿ ನೋಡುತ್ತ ನಿಂತಿರಲು, ದೇವಸ್ಥಾನ ದಲ್ಲಿ ರಾಮನಿದ್ದಂತೆ ಕಂಡುಬಂದಿತು. ಏನು ದಿಗ್ಭ್ರಮೆಯೋ? ರಾಮ ಅಲ್ಲೇಕೆ ಇರುವ? ಪುನಃ ನೋಡಿದ. ಅದೇ ಪ್ರತಿಮೆ. ಕನಸೆಂದು ಭಾವಿಸಿ ಮನೆಗೆ ಬಂದ.

ಪ್ರತಿದಿನವೂ ಆ ಸ್ಥಳಕ್ಕೆ ಹೋಗುವುದು; ಅಲ್ಲಿ ರಾಮನ ಮೂರ್ತಿ ಕಾಣುವುದು. ಏನು ರಾಮ ನನಗಿಂತ ಮುಂಚಿತವಾಗಿ ಬಂದನೇ. ಇಲ್ಲ! ಇರಲಾರದು! ಎಂದುಕೊಂಡ. ಹೀಗೆ ದಿನವೂ ಆತನು ಅಲ್ಲಿ ಹೋಗು ತ್ತಿರಲು ಒಂದು ದಿನ ಆ ಪ್ರತಿಬಿಂಬ ಕಾಣಲಿಲ್ಲ. ಅಂದಿನಿಂದ ಅದು ಕಾಣಲೇ ಇಲ್ಲ.

ನೋಡಬೇಕಾದ ಸ್ಥಳಗಳನ್ನೆಲ್ಲಾ ಕೆಲ ದಿನಗಳಲ್ಲಿ ನೋಡಿ ಬಂದ. ಮತ್ತೆ ದೇವರಿಗೆ ದೀಪಾರಾಧನೆ ಮಾಡಿಸಿ, ಆ ಪುಣ್ಯಸ್ಥಳದ ತೀರ್ಥವನ್ನು ಒಂದು ಶೀಷೆಯಲ್ಲಿ ತೆಗೆದುಕೊಂಡು ಸ್ವಗ್ರಾಮಕ್ಕೆ ಹೋಗಲು ನಿಶ್ಚಯಿಸಿ ಹಡಗು ಹತ್ತಿ ಕುಳಿತ.

ಹಡಗು ಕೆಲವು ದಿನಗಳಲ್ಲಿಯೇ ಜಫ್ನಾ ಸೇರಿತು. ಒಡೇಸಾಫೇ ಹೋಗುತ್ತಿದ್ದ ದೋಣಿಯಲ್ಲಿ ಕುಳಿತಲ್ಲಿಗೆ ಬಂದು ಮನೆಗೆ ಕಾಲುನಡಿಗೆಯಲ್ಲೆ ಹೊರಟ. ಹಿಂದೆ ತಾನು ಬಂದಿದ್ದ ಮಾರ್ಗವನ್ನೇ ಹಿಡಿದ. ಮನೆಗೆ ಸಮೀಪ ಸಮೀಪ ಬರುತ್ತಾ ಆತಂಕ ಆತನಿಗೆ ಹೆಚ್ಚಿತು. 'ಏನು ಈ ವರ್ಷ ಮಳೆಯಾಯಿತೋ ಇಲ್ಲವೋ, ಬೆಳೆಗಳು ಹೇಗಾಗಿವೆಯೋ. ನನ್ನ ಮಗ

ಹಣದ ಬಾಬತು ಏನು ಮಾಡಿರುತ್ತಾನೋ, ಬಿಪ್ತಿಗಳೆಲ್ಲಾ ಪಸೂಲಾಗಿರುತ್ತ ವೆಯೋ ಇಲ್ಲವೋ' ಮುಂತಾದ ಸಂದೇಹಗಳ ಬಾಧೆ ಹೆಚ್ಚಾಯಿತು. ರಹೀಮು ಒಂದು ದಿನ ಮಧ್ಯಾಹ್ನ ೧೨ ಗಂಟೆ ಸಮಯಕ್ಕೆ ತಾನೂ ರಾಮನೂ ಅಗಲಿದ ಸ್ಥಳಕ್ಕೆ ಬಂದ. ಆ ಜನಗಳ ರೂಪವೇ ಬದಲಾಯಿಸಿಹೋಗಿತ್ತು. ಹೋದ ವರ್ಷ ಮಳೆ ಬೆಳೆಯಿಲ್ಲದೆ ಹೊಟ್ಟೆಗಿಲ್ಲದೆ ಸಾಯುತ್ತಿದ್ದರು. ಆದರೆ ಈಗ ಅನುಕೂಲಸ್ಥರಾಗಿದ್ದಾರೆ.

ಆ ಹಳ್ಳಿಯನ್ನು ಆತ ಪ್ರವೇಶಮಾಡಲು, ಒಬ್ಬ ಚಿಕ್ಕ ಹುಡುಗ ರಹೀಮನನ್ನು ನೋಡಿ, 'ತಾತಾ, ತಾತಾ, ಬಾ ನಮ್ಮ ಮನೆಗೆ ಬಾ' ಎಂದು ಕರೆದ. ರಹೀಮು ಆಹ್ವಾನ ಆದರಿಸದೆ ಹೋಗುತ್ತಿರಲು ಆ ಬಾಲಕ ಬಂದು ಎಳೆಯಲಾರಂಭಿಸಿದ. ಕಡೆಗೆ ಬಾಲಕನ ಆಹ್ವಾನ ಸ್ವೀಕರಿಸಿ, ಅವರ ಗುಡಿಸಲಿಗೆ ಹೋಗಲು, ಅಲ್ಲಿನ ನಿವಾಸಿಗಳು ಆದರ ಪುರಸ್ಕಾರಗಳಿಂದ 'ತಾತಾ, ಬನ್ನಿ, ನಮ್ಮೊಂದಿಗೆ ಇವತ್ತು ಭೋಜನ ಮಾಡಿರಿ' ಎಂದರು. ರಹೀಮು ಪೂರ್ವ ವೃತ್ತಾಂತ ಸ್ಮರಿಸಿಕೊಂಡು, 'ಇರಲಿ, ರಾಮು ನೀರಿಗಾಗಿ ಹೋದ ಸ್ಥಳವೇ ಇದು, ಆತನ ವಿಚಾರ ಕೇಳುವೆ' ಎಂದಂದುಕೊಂಡ.

ಆ ಗುಡಿಸಲಿನ ಗೃಹಿಣಿ ಎಲ್ಲರಿಗೂ ಎಲೆ ಹಾಕಿ ಬಡಿಸಿದಳು. ಅವಳ ಆದರವನ್ನು ನೋಡಿ, ರಹೀಮು ಮೆಚ್ಚಿ 'ಅಮ್ಮ ಬಹಳ ಸಂತೋಷವಾಯಿತು. ಇಡೀ ಲೋಕ ಎಷ್ಟೇ ಕೆಟ್ಟರೂ ಪ್ರಯಾಣಿಕರಿಗೂ, ಅಪರಿಚಿತಸ್ಥರಿಗೂ ಆದರವನ್ನು ತೋರಿಸಿ, ಮರ್ಯಾದೆ ಮಾಡುತ್ತೀರಲ್ಲ; ನೀವೇ ಧನ್ಯರು, ನಿಮ್ಮ ಜನ್ಮವೇ ಪಾವನ.'

ಗೃಹಿಣಿ:—ತಾತಾ, ನಮ್ಮದೇನು ಹೆಚ್ಚುಗಾರಿಕೆ. ಎಲ್ಲಾ ಆ ಮಹಾನುಭಾವನದು, ಆ ಜಗಜ್ಯೋತಿಯದು. ನಮಗೆ ಪ್ರಾಣವನ್ನು ರಕ್ಷಿಸಿದ ಆಪದ್ಬಂಧುವಿನದು. ಆ ಮಹಾತ್ಮ, ನಾವೆಲ್ಲರೂ ಹೊಟ್ಟೆಗಿಲ್ಲದೆ ಸಾಯುತ್ತಿರುವ ವೇಳೆಯಲ್ಲಿ ಬಂದು, ನಮ್ಮನ್ನೆಲ್ಲಾ ಪೋಷಿಸಿ, ನಾವು ನಿರೋಗಿಗಳಾಗಲು, ನಮಗೆ ಅನುಕೂಲ್ಯಗಳನ್ನು ಕಲ್ಪಿಸಿ ಬೀಳ್ಕೊಂಡ. ಆ ಮಹಾತ್ಮ ಆಗಾಗ್ಗೆ ಹೇಳುತ್ತಿದ್ದ ವಚನಗಳನ್ನು ಪಾಲಿಸುತ್ತಿದ್ದೇವೆ.

ರಹೀಮು:—ಅಮ್ಮಾ, ಆ ವಚನಗಳಾವುವು?

ಗೃಹಿಣಿ:—ಆತನು ಹೇಳಿದ್ದೇನೆಂದರೆ: 'ಮಗಳೇ ಈಗ ನಿಮಗೆ

ಸಂಕಟ ಬಂದಿರುವುದು. ಮರುಗಬೇಡ, ತಾಳ್ಮೆಯಿಂದ ಸಹಿಸಿಕೊಳ್ಳಿ, ನೀವು ಉತ್ತಮ ಸ್ಥಿತಿಗೆ ಬರುವಿರಿ ಸಹಜ. ಆಗ ನಿಮ್ಮಂತಿರುವವರನ್ನು ಮರೆಯ ಬೇಡಿರಿ. ಪ್ರಯಾಣಿಕರನ್ನೂ ಇತರರನ್ನೂ ಆದರಿಸಿರಿ.'

ರಹೀಮ:—ಆತನಾರು? ಹೇಗಿದ್ದ?

ಆಕೆ ರಾಮನ ಚಹರೆಗಳನ್ನೆಲ್ಲಾ ಹೇಳಿದಳು. ಒಂದೊಂದು ಮಾತಿಗೆ ಒಂದುನೂರು ಸಲ ಆತನನ್ನು ಸ್ತುತಿಸಿದಳು. ರಹೀಮ ಆ ರಾತ್ರಿಯನ್ನು ಅಲ್ಲಿಯೇ ಕಳೆದ. ನಿದ್ದೆ ಬರಲಿಲ್ಲ.

'ಸರಿ, ಆತ ನನಗಿಂತ ಮುಂಚೆ ಹೋದದ್ದು ನಿಜ. ಹೇಗೇ ಆಗಲಿ, ಪರಮಾತ್ಮ ನನ್ನ ಸೇವೆ ಕೈಕೊಂಡನೋ ಇಲ್ಲವೋ ತಿಳಿಯದು; ಖಂಡಿತ ವಾಗಿಯೂ ರಾಮನ ಸೇವೆ ಸ್ವೀಕಾರಮಾಡಿರುವನು.'

೯

ರಹೀಮನ ಯಾತ್ರೆ ಒಂದು ಸಂಪೂರ್ಣ ಸಂವತ್ಸರ ಆವರಿಸಿತು. ಸಂಧ್ಯಾಕಾಲ ಮನೆಗೆ ಬಂದ. ಆಗ ಮಗ ಮನೆಯಲ್ಲಿರದೆ ಕಳ್ಳಂಗಡಿಯಲ್ಲಿದ್ದ. ಆತ ಕುಡಿದಿದ್ದುದರಿಂದ ಬರಲಿಲ್ಲ. ಇವನಿಲ್ಲದ ವೇಳೆಯಲ್ಲಿ ಸ್ವೇಚ್ಛಾ ವಿಹಾರಿಯಾಗಿ, ಹಣವನ್ನು ದುಂದುವೆಚ್ಚ ಮಾಡಿರುವನೆಂದು ತಿಳಿದು ಬಂತು. ರಹೀಮನಿಗೆ ಆಗ್ರಹ ಬಂತು. ಮಗನನ್ನು ಬೈದ. ಅದಕ್ಕೆ ಪ್ರತ್ಯುತ್ತರವಾಗಿ, 'ನಿನ್ನನ್ನು ಯಾತ್ರೆ ಹೋಗೆಂದವರಾರು? ಇದ್ದು ಎಲ್ಲಾ ನೋಡಿಕೊಳ್ಳಬೇಕಾಗಿತ್ತು' ಎನ್ನಲು ರಹೀಮನ ಆಗ್ರಹ ಹೆಚ್ಚಿ ಹೊಡೆದ.

ಮಾರನೆಯ ದಿನ ರಹೀಮ ಪಟೇಲನಿಗೆ ಈ ಸುದ್ದಿ ಹೇಳಲು ಹೊರಟ. ರಾಮನ ಮನೆ ಮುಂದೆ ಹೋಗಬೇಕಾಗಿದ್ದುದರಿಂದ ಅಲ್ಲಿ ರಾಮನ ಪತ್ನಿ ಯನ್ನು ಕಂಡ. ಆಕೆ:—

'ಅಣ್ಣಾ, ಪ್ರಯಾಣ ಹೇಗಿತ್ತು?' ಎಂದಳು.

'ತಂಗೀ, ಎಲ್ಲಾ ಸರಿಯಾಗಿತ್ತು, ನಿಮ್ಮ ಯಜಮಾನನೂ ನಾನೂ ದಾರಿಯಲ್ಲೇ ಅಗಲಿದೆವು. ಪರಮಾತ್ಮನಿಗೆ ವಿಜಯವಾಗಲಿ! ಅಮ್ಮಾ, ನಿಮ್ಮ ಯಜಮಾನ ಎಲ್ಲಿ?'

'ತೋಟದಲ್ಲಿರುವರು' ಎಂದು ಹೇಳಿ ಒಳಗೆ ಹೋದಳು.

ರಹೀಮ ತೋಟಕ್ಕೆ ಹೋದ. ಅಲ್ಲಿ ಅಗೆಯುತ್ತಿದ್ದ ರಾಮುನನ್ನು ಕಂಡ. ಆನಂದಬಾಷ್ಪಗಳು ತಾವಾಗಿಯೇ ಉದುರಿದುವು. ಕಂಠ ಬಿಗಿದು ಬಂತು. ಮಾತನಾಡದೆ ನಿಂತ.

ರಾಮುನಿಗೆ ಆಶ್ಚರ್ಯವಾಯಿತು. 'ರಹೀಮ, ನಿನ್ನ ಯಾತ್ರೆ ಸಾಂಗ ವಾಗಿ ನಡೆಯಿತೇ? ಪರಮಾತ್ಮನ ದಿವ್ಯ ದರ್ಶನ ಮಾಡಿದೆಯಾ. ಆ ಪುಣ್ಯ ನನಗಿಲ್ಲದೆ ಹೋಯಿತು' ಎಂದ.

ರಹೀಮ:—ಮಿತ್ರಾ, ಸಾಕು ಸುಮ್ಮನಿರು. ನನ್ನ ಪಾದಗಳಿಗೆ ನಿರಾತಂಕವಾಗಿ ಯಾತ್ರೆಯಾಯಿತು. ನನ್ನ ಆತ್ಮಕ್ಕಲ್ಲ; ನನ್ನ ಮನಸ್ಸು ಇಲ್ಲಿತ್ತು. ನನ್ನ ದೇಹ ಅಲ್ಲಿತ್ತು. ರಾಮಣ್ಣಾ! ಧನ್ಯ! ನೀನೇ ಧನ್ಯ! ಈಗ ತಿಳಿಯಿತು. ನಿನ್ನಿಂದ ಭಗವಂತನನ್ನು ಮೆಚ್ಚಿಸುವ ರೀತಿಯನ್ನರಿತೆ.

ರಾಮು:—ಹಾಗಂದರೇನಯ್ಯಾ, ನನ್ನಿಂದ ತಿಳಿಯುವುದೇನು?

ರಹೀಮ:—ಜೆರೂಸಲೇಮಿನಿಂದ ಬರುತ್ತಾ ನಿನ್ನಿಂದ ಉದ್ಧಾರ ಹೊಂದಿದವರ ಗುಡಿಸಲಿಗೆ ಹೋಗಿದ್ದೆ.

'ಸುಮ್ಮನೆ ತೀರ್ಥಯಾತ್ರೆಗಳನ್ನು ಮಾಡುವುದಕ್ಕಿಂತಲೂ ಅದೇ ಶ್ರದ್ಧೆಯಿಂದ ಜನಸೇವೆಯನ್ನು ಮಾಡಿದರೆ ಭಗವಂತನನ್ನು ಬೇಗ ಮೆಚ್ಚಿಸ ಬಹುದೆಂದು ಅರಿತೆ.'

ಎಂದು ಹೇಳಿ, ರಾಮುನನ್ನು ಅಪ್ಪಿದ. ಇಬ್ಬರೂ ಮೆಲ್ಲಗೆ ಬಂದು ಗೃಹಗಳನ್ನು ಸೇರಿದರು.

---

# ಹೆಣ್ಣು - ಹುಚ್ಚು

ತಂಗಿ ಕಣ್ಣೀರು ಹಾಕುತ್ತ ನಿಂತಿದ್ದಳು.

ಅಣ್ಣಂದಿರು ವಿಚಾರಮಾಡುತ್ತ ತಲೆಯ ಮೇಲೆ ಕೈಹೊತ್ತು ಕುಳಿತಿದ್ದರು. ಸಭೆ ಗಂಭೀರವಾಗಿ ಕುರುಸಭೆಯನ್ನು ಹೋಲುತ್ತಿತ್ತು. ಜಗಜ್ಜೇತರಾದ ಗಂಡಂದಿರಿದ್ದರು ದ್ರೌಪದಿಗೆ. ಆದರೆ ಆಕೆಯ ಮಾನಾಪಹರಣವಾಗುತ್ತಿದ್ದಾಗ ನೆರವಿಗೆ ಯಾರೂ ಬರಲಿಲ್ಲ. ಪಾರ್ವತಿಯ ದುಃಖ ಅಷ್ಟೇ ಆಳವಾದದ್ದು. ಮಲ್ಲಿಗೆ ಹೂವಿನ ಹಾಗೆ ಬೆಳೆದಿದ್ದ ಹುಡುಗಿ ದುಃಖದುರಿಯಲ್ಲಿ ಬಾಡಿ ಕಂದಿದ್ದಳು. ಮುಖ ನಿಸ್ತೇಜವಾಗಿತ್ತು. ಹಗಲಿರುಳೂ ಅತ್ತು ಅತ್ತು ಕಣ್ಣುಗಳು ಗುಳಿಬಿದ್ದಿದ್ದವು. ಉಕ್ಕಿ ಬರುತ್ತಿದ್ದ ಕೋಪವನ್ನು ತಡೆಗಟ್ಟಿ ವೆಂಕಣ್ಣ ಭೀಮನಂತೆ ಕಂಪಿಸುತ್ತ ಕುಳಿತ. ಶಾಮು ವೆಂಕಣ್ಣನಷ್ಟು ದುಡುಕಲ್ಲ. ಪೂರ್ವಾಪರಗಳನ್ನು ಯೋಚಿಸಿ ಶಾಂತರೀತಿಯಲ್ಲಿ ಕೆಲಸವನ್ನು ಸಾಧಿಸಬೇಕೆಂಬುದು ಅವನ ಮತ. ವೆಂಕಣ್ಣ ಯೋಚಿಸಿ ಯೋಚಿಸಿ

'ಪಾತೀ, ಒಂದು ಮಾತು ಹೇಳ್ತೀನಿ ಕೇಳುವೆಯಾ ?'

'ಏನದು ?'

'ಆ ಲಫಂಗನ ಸಹವಾಸವೇ ಬೇಡ. ಸುಮ್ಮನೆ ಇಲ್ಲೆ ಇದ್ದುಬಿಡು.'

'ಪಾತೀ ಇಲ್ಲೇ ಇದ್ದರೆ ಅವನಿಗೆ ಮತ್ತಷ್ಟು ಅನುಕೂಲ ನಾವೇ ಕಲ್ಪಿಸಿಕೊಟ್ಟಂತಾಗುತ್ತದೆ.'

'ಆದರಾಯ್ತು, ಏನು ಮಾಡುವುದಕ್ಕಾಗುತ್ತದೆ. ಈ ಹತ್ಯಾಕಾಂಡ ನೋಡಿ ಯಾರು ಸಹಿಸುವುದಕ್ಕಾಗುತ್ತದೆ. ಪಾತೀ ತಂಗಿ ಅನ್ನೋದನ್ನ ಮರೆತು ಮಮ್ಮಗಳೆಂದುಕೊಂಡು ಸಾಕುತ್ತೇನೆ. ನನಗೆ ಅವಳೊಂದು ಹೊರೆಯೇ ?'

'ಅದಕ್ಕಲ್ಲ ವೆಂಕಣ್ಣ. ಹೆಣ್ಣಿಗೆ ತವರುಮನೆ ಎಷ್ಟು ಆಪ್ಯಾಯಮಾನವಾಗಿದ್ದರೂ ಗಂಡನ ಮನೆಗೆ ಸರಿಹೋಲುವುದೇ ? ನೋಡಿದವರು ಏನನ್ನುತ್ತಾರೆ. ನಾವೇ ಬೇಕೂಂತ ಪಾತೀನ ಗಂಡನ್ನ ಬಿಡಿಸಿ ಕರೆದುಕೊಂಡು ಬಂದು ಇಟ್ಟುಕೊಂಡೆವು ಎಂದು ಹೇಳುವುದಿಲ್ಲವೇ ?'

ಚೆನ್ನಿ ಜಾತಿಯಲ್ಲಿ ದೊಂಬರವಳು. ದೊಂಬರ ಹೆಣ್ಣಿನ ಚಾಕಚಕ್ಯ, ಮೈಮಾಟ ಅವಳ ಬಂಡವಾಳವಾಗಿತ್ತು. ನೋಡುವುದಕ್ಕೆ ರೂಪವತಿಯಲ್ಲ. ಬಣ್ಣ ಮಾಸಲು ಕೆಂಪು. ಆದರೆ ಎರಡು ಕಣ್ಣುಗಳೂ ಕಾದ ಕಬ್ಬಿಣದ ತಟ್ಟೆಗಳ ಹಾಗಿದ್ದವು. ದೇಹ ನಸು ಮಾಟವಾಗಿ ಬಿಲ್ಲಿನ ಹಾಗಿತ್ತು. ತುಂಬಿದ ಮೈಯಾದರೂ ಸ್ಥೂಲವಲ್ಲ. ಅವಳು ಹರಿದಾಡಿದರೆ ಮಿಂಚು ಹೊಳೆದಂತಾಗುತ್ತಿತ್ತು. ಬಾಯಿ ತೆರೆದರೆ ಗ್ರಾಮ್ಯ ಶಬ್ದಗಳ ಸುಂಮಳೆ—ಹೊಲಸು ನುಡಿಗಳ ಹೊಳೆ. ಆದರೆ ನಸುನಕ್ಕರೆ ಹಾಲು ಹೊಳೆ ಹರಿದಂತಾಗುತ್ತಿತ್ತು. ಕಡೆದ ಶಿಲ್ಪದ ಹಾಗಿದ್ದ ಹೆಣ್ಣು ರೂಪವಿಲ್ಲದ ರೂಪಸಿ; ವಿದ್ಯಾಬುದ್ಧಿಯಿಲ್ಲದ ಕಲಾಪಂಡಿತೆ. ಅವಳ ಕಣ್ಣು ಕೊನೆಯಲ್ಲಿ ವಾತ್ಸಾಯನರು ದೊಂಬರಲಾಗ ಹೊಡೆದಿದ್ದರು. ನಡೆಯ ಬೆಡಗು ನವಿಲನ್ನು ನಾಚಿಸುತ್ತಿತ್ತು. ಚೆನ್ನಿ, ಅವಳ ತಾಯಿ ಗಂಗೆಯರ ಜೀವನ ದೇಹವಿಕ್ರಯದಿಂದಲೇ ಸಾಗಿತ್ತು. ವೀರಭದ್ರ ಚೆನ್ನಿಗೆ ನಚ್ಚಿನ ಗೆಳೆಯ. ಅವಳನ್ನು ಔದಾರ್ಯದಿಂದ ಶ್ರೀನಿವಾಸನಿಗೆ ಧಾರೆಯೆರೆದು ತಾನು ಹಿಂದೆ ಸರಿದಿದ್ದ. 'ದೊಡ್ಡವರು—ಬ್ರಾಂಬರು—ಊರ ಶಾನುಭೋಗರು ತನ್ನ ಮಡಗಿಕೊಂಡಿದ್ದಾರೆಂದು' ಚೆನ್ನಿಯ ಹೆಮ್ಮೆ ಹೇಳತೀರದು. ಚೆನ್ನಿಗೆ ನಾಲ್ಕು ಅಕ್ಷರ ಬರುತ್ತಿದ್ದು ಅವಳು ಶಾಲೆಗೆ ಕೆಲವು ದಿವಸ ಮಣ್ಣು ಹೊತ್ತಿದ್ದಳು. ಇದೂ ಅವಳ ಹೆಮ್ಮೆಯನ್ನು ಹೆಚ್ಚಿಸಿತ್ತು.

ಚೆನ್ನಿಯ ಹಿಂದಿನ ಬಾಳುವೆ ಶ್ರೀನಿವಾಸನಿಗೆ ತಿಳಿಯದಿರಲಿಲ್ಲ. ಆದರೆ ಅದನ್ನು ಮರೆಸುವುದು ಚೆನ್ನಿಗೆ ದೊಡ್ಡ ಕೆಲಸವಾಗಲಿಲ್ಲ. 'ನೀವೇ ನನ್ನ ಪರಾಣ' ಎಂದು ಅವಳು ಅವನನ್ನು ನಂಬಿಸಿದ್ದಳು. ಎರಡೆರಡು ದಿವಸಕ್ಕಾದರೂ ಒಮ್ಮೆ

'ನನ್ನ ಕೈ ಬುಟ್ಬುಬಿಡ್ತೀರಾ ?' ಎಂದು ಕೇಳುವಳು. ಶ್ರೀನಿವಾಸ ಅವಳ ಮುಂಗುರುಳನ್ನು ತಿದ್ದುತ್ತಾ

'ಇಲ್ಲ ಚಿನ್ನಾ........ಪ್ರಪಂಚವನ್ನೇ ಬಿಟ್ಟುಬಿಡ್ತೀನಿ. ನಿನ್ನ ಬಿಡಲಾರೆ.'

ಎಂದು ಧೈರ್ಯ ಹೇಳುತ್ತಿದ್ದ. ಅವಳ ಸ್ನೇಹಕ್ಕೆ ಭ್ರಾಂತನಾಗಿ ಅವಳ ಶೀಲದಲ್ಲಿ ಸಂಪೂರ್ಣ ನಂಬಿಕೆಯನ್ನಿಟ್ಟ.

'ಏನೋ ಪಾಪ! ಹಿಂದೆ ಹೊಟ್ಟೆಪಾಡಿಗೆ ಹಾಗಿದ್ದಿರಬಹುದು. ಈಗ ನನ್ನ ಬಿಟ್ಟು ಬೇರೆ ಗಂಡಸನ್ನು ಕತ್ತೆತ್ತಿಯೂ ನೋಡುವುದಿಲ್ಲ' ಎಂದು ನಂಬಿಕೆ ತಳೆದ.

ಕದ್ದು ಕಾಣದಂತೆ ಚೆನ್ನಿಯ ಮನೆಗೆ ಬರುತ್ತಿದ್ದವನು 'ರಾಜಾರೋಷ ವಾಗಿ ಬರಲಾರಂಭಿಸಿದ. ಮೋಹ ಬೆಳೆಯುತ್ತ ಬೆಳೆಯುತ್ತ ಮನೆಯ ಹಂಬಲವೇ ಹೋಗುತ್ತ ಬಂತು. ಚೆನ್ನಿಯ ಮನೆ ಅವನ ಮನೆಯಾಗುತ್ತ ಬಂತು. ಹಗಲು ರಾತ್ರಿಗಳನ್ನು ಅಲ್ಲಿಯೇ ಕಳೆಯುತ್ತ ಬಂದ. ಚೆನ್ನಿ ಅವನನ್ನು ಚೆನ್ನಾಗಿ ತನ್ನ ಬಾಹುಬಂಧನದಲ್ಲಿ ಬಿಗಿಹಿಡಿದಳು. ಅವನಿಗೆ ಜಗತ್ತೇ ಬೇಡವಾಗುತ್ತ ಬಂತು. ರೈತರು ದಣಿಗಳ ಸಂದರ್ಶನಕ್ಕೆ ಚೆನ್ನಿಯ ಮನೆಗೆ ಬರಬೇಕಾಗಿ ಬಂತು.

'ಎಂತಾ ಗಾಸಾರ ಬಂತಪ್ಪ. ಈ ಹೊಲತಿ ಮನೆ ಹಾಯ್ಬೇದು' ಎಂದು ರೈತರು ಸಿಡಗುಟ್ಟತೊಡಗಿದರು.

ತಾಯಿ ನಯದಲ್ಲಿ ಭಯದಲ್ಲಿ ಮಗನಿಗೆ ಬುದ್ಧಿಯ ಮಾತು ಹೇಳಿದರು. ಕಣ್ಣಲ್ಲಿ ನೀರು ತಂದುಕೊಂಡರು. ಊಟ ಮಾಡುವುದನ್ನು ಬಿಟ್ಟರು. ಶ್ರೀನಿವಾಸ 'ಜಪ್ಪಯ್ಯ' ಎನ್ನಲಿಲ್ಲ. ಪಾತುನಿಗಾ ತ್ತಿದ್ದ ಪ್ರಹರವನ್ನು ನೋಡಲಾರದೆ ಹೆಣ್ಣುಮಗಳು ಕೆಲವು ದಿವಸವಾದರೂ ತೌರುಮನೆಯಲ್ಲಿದ್ದು ಬರಲೆಂದು ತಾವೇ ಕಾಗದ ಬರೆಸಿ ಕ[illegible] ಕಳುಹಿಸಿ ಕೊಟ್ಟರು.

ಶ್ರೀನಿವಾಸನಿಗೆ ನಿರಾತಂಕವಾಯಿತು. ಅವನ ರಸಲೀಲೆ ಅಬಾಧಿತ ವಾಗಿ ಮುಂಪುವರಿಯಲು ಅನುಕೂಲವಾಯಿತು. ಮನೆಗೆ ಊಟಕ್ಕೆ ಬರುವ ತೊಂದರೆಯನ್ನೂ ನೀಗಿಕೊಂಡ. ಚೆನ್ನಿ ಮನೆಯಲ್ಲಿಯೇ ಊಟ ಉಪಚಾರ ಗಳು ಆರಂಭವಾದವು. ಕಣ್ಣಮುಂದೆ ಚೆನ್ನಿ ಇದ್ದರಾಯಿತು—ಅವನಿಗೆ ಏನೂ ಬೇಕಾಗುತ್ತಿರಲಿಲ್ಲ. ಅವನ ಕಣ್ಣು ಅತ್ತಿತ್ತ ಚಲಿಸುತ್ತಿರಲಿಲ್ಲ. ಆ ದುಂಡನೆಯ ಮೊಲೆಗಳು—ಕೃಶವಾದ ಕಟಿ—ಮಾಟವಾದ ತೊಡೆಗಳು—ವಿಶಾಲವಾದ ಕಣ್ಣುಗಳನ್ನು ಎಷ್ಟು ನೋಡಿ ತನ್ನ ತನುಭಂಡಾರ ತುಂಬಿದರೂ ಅವನಿಗೆ ಸಾಲದು. ಬ್ರಹ್ಮನ ಸೃಷ್ಟಿ ಇಲ್ಲಿಗೆ ಮುಗಿಯಿತೆಂದು ಅವನ ಕಲ್ಪನೆ. ಸೌಂದರ್ಯವೇದದ ಪೂರ್ಣವಿರಾಮ ಚೆನ್ನಿಯಲ್ಲಿ ಕಂಡಿತೆಂದು ಅವನ ಭಾವನೆ.

ಕಾಮುಜೀವನದ ತುತ್ತತುದಿಯನ್ನು ಮುಟ್ಟಿದ್ದ ಚೆನ್ನಿ ಶ್ರೀನಿವಾಸನನ್ನು ಹಾವಡಿಗ ಹಾವು ಆಡಿಸುವಂತೆ ಆಡಿಸುತ್ತಿದ್ದಳು. ಸ್ತ್ರೀ ಸಹಜವಾದ ಲಜ್ಜೆಯೂ ಅವಳ ಅಂಗಡಿಯಲ್ಲಿ ಒಂದು ಮಾರುವ ದಿನಸಾಯಿತು. ಕಾಮು ಕೇಳಿಯಲ್ಲಿ ವಿಲೀನನಾದಷ್ಟೂ ಶ್ರೀನಿವಾಸನ ಅತೃಪ್ತಿ ಹೆಚ್ಚುತ್ತಿತ್ತು. ತೃಪ್ತಿ ಯಾಗಲಿಲ್ಲವೆಂದು ಮತ್ತೆ ಕ್ರೀಡೆ ಮತ್ತೆ ಅತೃಪ್ತಿ. ಅರಳುತ್ತಿದ್ದ ಮೊಗ್ಗೆ ಬಾಡುತ್ತ ಬಂದಿತು. ವ್ಯೆ ... ಗುತ್ತ ಬಂದಿತು. ಮುಖದಲ್ಲಿನ ಸೌಮ್ಯ ಕಳೆ ವಿಷಯಾಸಕ್ತಿಯ ರುದ್ರ ...ರ್ಯಕ್ಕೆ ಎಡೆ ಮಾಡಿಕೊಟ್ಟಿತು. ಅವನ ಬಾಳಕುದುರೆ ಚೆನ್ನಿ ರು ...ಮ ಮೃಗಜಲದ ಬೆನ್ನುಹತ್ತಿತು, ಒಂದೇ ಸಮನಾಗಿ.

ಒಮ್ಮೊಮ್ಮೆ ಸಾತೂ ನೆನಪು ಶ್ರೀನಿವಾಸನಿಗೆ ಬರುತ್ತಿತ್ತು. ಅದೂ ಎಳೆಯ ಬಾಳು. ಸ್ನಿಗ್ಧ ಸ್ನೇಹ—ಗಂಡನ ಸೇವೆಗಾಗಿ ಮೈದುಡಿಸುವ ಮೈಯುಣಿಸುವ ಮನೋಭಾವ. ಗಂಡನ ತೃಪ್ತಿಯಲ್ಲಿ ಒಂದು ಸ್ವರ್ಗವನ್ನು ಕಾಣುವ ಪ್ರಕೃತಿ. ಅಲ್ಲಿಯೂ ಅವನಿಗೆ ಯಾವದಕ್ಕೂ ಕೊರತೆಯಿರಲಿಲ್ಲ. ಆದರೆ ಮನುಷ್ಯನ ರಾಕ್ಷಸೀ ಲಾಲಸೆ ನಿಜರೂಪು ಹೊತ್ತು ನಿಂತಾಗ ಸಾತ್ವಿಕ ಕಳೆ ಕೂಂಚ ಹಿಂದೆ ಸರಿಯಬೇಕಾಯಿತು. ಕೀಳು ಕಾಮನೆ ಬೇಡುವುದು ತೃಪ್ತಿಯನ್ನಲ್ಲ—ಅತೃಪ್ತಿಯನ್ನು ; ಶಾಂತಿಯನ್ನಲ್ಲ—ಅಶಾಂತಿಯನ್ನು ; ಸಮಾಧಾನವನ್ನಲ್ಲ—ಉದ್ರೇಕವನ್ನು !

ಗುಂಡ ಬರುತ್ತಲೆ ಮಂತ್ರಾಲೋಚನ ಸಭೆ ಮತ್ತೆ ಸೇರಿತು. ವೆಂಕಣ್ಣ ಪರಿಸ್ಥಿತಿ ತಳೆದಿದ್ದ ಬೃಹದಾಕಾರದಲ್ಲಿ ತನ್ನ ವಿಚಾರಶಕ್ತಿಯನ್ನೇ ಕಳೆದು ಕೊಂಡಿದ್ದ. ಇಂತಹ ಸೂಕ್ಷ್ಮ ಪ್ರಸಂಗವನ್ನು ಹೇಗೆ ಎದುರಿಸಬೇಕೆಂಬುದು ಅವನಿಗೆ ತಿಳಿಯದಾಯಿತು.

'ಅವಳೇನಾದರೂ ಮಂತ್ರ ಮಾಟ ಮಾಡಿಸಿದ್ದಾಳೆಯೋ ?'

'ಹಾಗೆಂದರೆ.'

'ಪುರುಷವಶ್ಯ. ತಲೆಗೆ ಎಂಥದೊ ಎಣ್ಣೆ ತಿಕ್ಕುತ್ತಾರಂತೆ. ಗಂಡಸರು ಹೆಂಗಸರ ಗುಲಾಮರಾಗುತ್ತಾರಂತೆ.'

'ದೊಂಬರು ಇಂತಹ ವಿದ್ಯೆಗಳಲ್ಲಿ ನಿಸ್ಸೀಮರಂತೆ' ಎಂದು ಶಾಮೂ ಸೇರಿಸಿದ.

'ನಾವು ಒಬ್ಬ ಮಾಂತ್ರಿಕನ ಕೈಯಲ್ಲಿ 'ತ್ರೋಡು'* ಮಾಡಿಸಿದರೂ ?'

ಗುಂಡ ಎಲ್ಲವನ್ನೂ ಸಾವಧಾನವಾಗಿ ಕೇಳಿದ. ದೀರ್ಘವಾಗಿ ಯೋಚಿಸುತ್ತ ಕುಳಿತ.

'ಏನಾದರೂ ಹೇಳು ಮಾರಾಯ. ಸುಮ್ಮನೆ ದೇವಸ್ಥಾನದ ಗೊಂಬೆ ಹಾಗೆ ಕುಳಿತರೆ ಆಗುತ್ತದೆಯೇ ?'

'ನೋಡು ವೆಂಕಣ್ಣ—ಇದು ಬಹಳ ಜಟಿಲ ಪ್ರಶ್ನೆ. ಇದನ್ನು ಎದುರಿಸುವುದಕ್ಕೆ ಕೌಶಲ್ಯ, ಕೌಟಿಲ್ಯ ಎರಡೂ ಬೇಕು. ನಾನು ಮೊದಲು ಆ ಡೊಂಬರ ರಂಭೆಯನ್ನು ನೋಡಿ ಬಂದು ಮುಂದಿನ ಮಾತನಾಡುತ್ತೇನೆ.'

'ಅವಳನ್ನೇನಯ್ಯಾ ನೋಡುವುದು ?'

'ಇದೆಯಪ್ಪಾ—ಅಲ್ಲೇ ಇದೆ ಪರಿಹಾರೋಪಾಯ.'

'ಅದೂ ಒಳ್ಳೆಯದೇ—ಕಾಸೋ ದುಡ್ಡೋ ಕೊಟ್ಟುಬಿಡೋಣ. ಆ ರಂಡೆ ನಮ್ಮ ಹುಡುಗನ್ನ ಬಿಟ್ಟುಬಿಡಲಿ.'

'ಅವಳಿಗೆ ಕಾಸೂ ದುಡ್ಡು ಕೊಡಹೋದರೆ ಅವರ ಮೈತ್ರಿ ಇನ್ನೂ ನಿಕಟವಾಗುತ್ತದೆ.'

'ಹಾಗಾದರೆ ಒಬ್ಬ ದಾಂಢಿಗನ್ನ ಗೊತ್ತುಮಾಡಿ ಅವಳ ಸೊಂಟ ಮುರಿಸ್ತೀನಿ.'

'ಒರಟುತನದಿಂದ ಪ್ರಯೋಜನವಿಲ್ಲ ವೆಂಕೂ—ಸ್ವಲ್ಪ ಸುಮ್ಮನಿರು. ನಾನು ಮೈಸೂರಿಗೆ ಹೋಗಿ ಬರುವ ತನಕ ಸುಮ್ಮನಿರು.'

ವೆಂಕಣ್ಣ ಅರೆಮನಸ್ಸಿನಿಂದ ಒಪ್ಪಿದ. ಗುಂಡ ವೃಥಾ ಕಾಲಹರಣ ಮಾಡುತ್ತಾನೆಂದೇ ಅವನ ಸಂದೇಹ. ಗುಂಡ ಹೆಚ್ಚು ಕಾಲಹರಣ ಮಾಡಲಿಲ್ಲ. ಕೂಡಲೆ ಮೈಸೂರಿಗೆ ಪ್ರಯಾಣ ಬೆಳಸಿದ.

ಅವನು ಹೋಗಿ ಆರು ದಿವಸಗಳ ಮೇಲಾದರೂ ಸುದ್ದಿ ಸಮಾಚಾರವಿಲ್ಲ. ವೆಂಕಣ್ಣನ ಉದ್ವೇಗ ಮತ್ತಷ್ಟು ಹೆಚ್ಚಿತು. ಒಂದು ದಿನ ವೆಂಕಣ್ಣ ಊಟ ಮುಗಿಸಿ ಕೈ ತೊಳೆಯುತ್ತಿರುವ ಹೊತ್ತಿಗೆ ಅಂಚೆಯಾಳು ಒಂದು ಕಾಗದ ತಂದಿತ್ತ. ಗುಂಡನ ಕಾಗದ—ನಾಲ್ಕೇ ಪಂಕ್ತಿ—'ಕೂಡಲೆ ಕೆಳಗೆ

---

* ಪ್ರತಿಕ್ರಿಯೆ

ಕಾಣಿಸಿದ ಪ್ರೈಜು ಬಹುಮಾನಕ್ಕೆ ನೂರು ರೂಪಾಯಿ ಮನಿಯಾರ್ಡರು ಮಾಡು' ಎಂದಿತ್ತು. ವೆಂಕಣ್ಣ ಹಿಂದುಮುಂದು ನೋಡದೆ ಹಣ ಕಳುಹಿಸಿದ.

ಮತ್ತೆ ಗುಂಡನಿಂದ ಸುದ್ದಿ ಸಮಾಚಾರವಿಲ್ಲ.

'ಶಾಮೂ, ಗುಂಡ ಈ ಸಲದಲ್ಲಿ ನೂರು ರೂಪಾಯಿಗೆ ಹಾಕಿದನಪ್ಪಾ ಕತ್ತರಿ.'

'ನಿನ್ನದು ಬಹಳ ಅವಸರ ವೆಂಕಣ್ಣ. ಅಂಗೈಯಲ್ಲಿ ಕೈಲಾಸ ಕಾಣುವುದಕ್ಕಾಗುತ್ತದೆಯೋ ? ಸ್ವಲ್ಪ ತಡೆದುಕೊಳ್ಳಬೇಕು.'

ವೆಂಕಣ್ಣ ಕೋಟು ತಗುಲಿಸಿಕೊಂಡು ಹೊರಗೆ ಹೊರಟ. ಅವನು ಹಿಂದಿರುಗಿ ಬಂದಾಗ ಅವನು ಕಂಡ ನೋಟ ಅಚ್ಚರಿಯನ್ನುಂಟುಮಾಡಿತು. ತನ್ನ ಕಣ್ಣನ್ನು ತಾನೇ ನಂಬದಾದ. ತೊಟ್ಟಿಯಲ್ಲಿ ಚಾಪೆಯ ಮೇಲೆ 'ಅಳಿಯದೇವರು' ಮಂಡಿಸಿದ್ದರು. ಶಾಮೂ ಅವನ ಜತೆ ಹರಟೆ ಹೊಡೆಯುತ್ತಿದ್ದ.

'ಯಾವಾಗ ಬಂದೆಯಪ್ಪಾ.'

'ಸ್ವಲ್ಪ ಹೊತ್ತಾಯಿತು.'

'ಒಬ್ಬನೇ ಬಂದೆಯಾ ?'

'ಇಲ್ಲ. ಅಮ್ಮನೂ ಬಂದಿದ್ದಾರೆ.'

'ಅಮ್ಮನೂ ಬಂದಿದ್ದಾರೆಯೋ ? ತುಂಬ ಸಂತೋಷ.'

ಒಳಗೆ ಹೋಗಿ ಶ್ರೀನಿವಾಸನ ತಾಯಿಯನ್ನು ಮಾತನಾಡಿಸಿ ಬಂದ. ಮಧ್ಯಾಹ್ನ ಹೇಳಿಕಳುಹಿಸಿದ ಹಾಗೆ ಗುಂಡ ಇಳಿದುಬಿಟ್ಟ. ಅಳಿಯಂದಿರನ್ನು ಅವರ ತಾಯಿಯನ್ನು ನಾಲ್ಕು ದಿವಸ ಇಟ್ಟುಕೊಂಡು ಸೊಗಸಾದ ಆತಿಥ್ಯ ಮಾಡಿ, ಉಡುಗೊರೆಯನ್ನು ಕೊಟ್ಟದ್ದಾಯಿತು. ಶ್ರೀನಿವಾಸನ ತಾಯಿ ಪಾತುವನ್ನೂ ಹೊರಡಿಸಿದ್ದರು. ವೆಂಕಣ್ಣ ತಂಗಿ, ಭಾವಂದಿರನ್ನು ಸಂತೋಷವಾಗಿ ಬೀಳ್ಕೊಟ್ಟ.

ಅವನಿಗೊಂದೂ ಅರ್ಥವಾಗಲಿಲ್ಲ. ಗುಂಡ ಬಾಯಿ ಬಿಡಲಿಲ್ಲ. ಸುಮ್ಮನೆ ಉಂಡೇ ನಶ್ಯ ತಿಕ್ಕುತ್ತ ಕುಳಿತಿದ್ದ. ವೆಂಕಣ್ಣನ ಉತ್ಸಾಹ ಉದ್ವೇಗ ಸಹಿಸಲಸಾಧ್ಯವಾಯಿತು.

'ಗುಂಡಾ, ನೀನು ನಮ್ಮ ಭಾಗದ ದೇವರಪ್ಪಾ. ಎರಡು ಮನೆ ಉಳಿಸಿದೆ.'

'ಏನು ಹೊರಗಿನವರಿಗೆ ಹೇಳುವ ಹಾಗೆ ಉಪಚಾರ ಹೇಳುವುದಕ್ಕೆ ಆರಂಭಿಸಿದೆ.'

'ಆದಿರಲಿ. ಏನು ಮಾಡಿದೆ ಹೇಳು. ಡೊಂಬರ ರಂಭೇನ ಹೇಗೆ ಸಾಗ ಹಾಕಿದೆ?'

'ನೋಡು ವೆಂಕಣ್ಣ. ಮಂತ್ರ ಮಾಟ, ಕಾಲು ಮುರಿಯೋದು—ದುಡ್ಡು ಕೊಡೋದು ಇವೆಲ್ಲಾ ನಿಷ್ಪ್ರಯೋಜಕ ಎಂದು ನಾನು ಹೇಳಿರ ಲಿಲ್ಲವೇ?'

'ಹೌದು ಹೇಳಿದ್ದೆ.'

'ಅವುಗಳನ್ನು ಬಿಟ್ಟು ಬೇರೆ ದಾರಿ ಹುಡುಕಬೇಕಾಯಿತು. ಸ್ವಲ್ಪ ಅಡ್ಡ ದಾರಿ.'

'ಏನು ಮಾಡಿದೆ.'

'ಏನೂ ಇಲ್ಲ. ನಮ್ಮ ಇಂಗ್ಲೀಷ್ ಕ್ಲಬ್ ಪುಟ್ಟಶಾಮಿ ಗೊತ್ತಲ್ಲ ನಿನಗೆ.'

'ಗೊತ್ತು—ಸಿಸ್ತುಗಾರ ಪ್ರಾಣಿ.'

'ಅವನನ್ನು ಹಿಡಿದೆ. ಮೈಸೂರಿಗೆ ಅವನನ್ನು ಹೊತ್ತು ಹಾಕಿ 'ಛೂ' ಬಿಟ್ಟೆ. ಮೆಲ್ಲಗೆ ಚೆನ್ನಿ ತಾಯಿ ಸ್ನೇಹ ಸಂಪಾದಿಸಿದೆವು. ಆಕೆಯ ಕೈಗೆ ಹತ್ತಾರ ವರಹಾ ನೋಟು ಹೋಯಿತು. 'ಸುಮ್ಮನೆ ಈ ಹಾಳು ಕೊಂಪೇಲಿ ರಂಭೆ ಅಂಥಾ ನಿನ್ನ ಹುಡುಗೀನ ಯಾಕೆ ಕೊಲೆ ಮಾಡುತ್ತಿ—ಈ ನಮ್ಮ ಸಾಹುಕಾರರು ಸಿನಿಮಾ ಚಿತ್ರ ಮಾಡಬೇಕೆಂದಿದ್ದಾರೆ. ಅವರ ಜತೆ ಕಳುಹಿಸಿ ಕೊಡು. ನಿನ್ನ ಮಗಳು ದೊಡ್ಡ ಸಿನೀಮಾ ತಾರೆಯಾಗಿ ನಿನ್ನ ಮನೆಗೆ ಬಂಗಾರದ ಕಳಶ ಹಾಕಿಸುತ್ತಾಳೆ' ಎಂದು ಉಪದೇಶ ಮಾಡಿಸಿದೆವು.'

'ಮುದುಕಿಯನ್ನೊಪ್ಪಿಸಿದಿರಿ—ಆದರೆ ಚೆನ್ನಿ.'

'ಸಿನೀಮಾ ತಾರೆ ಎಂದು ಕೇಳಿದೊಡನೆಯೇ ಆ ಮುಕ್ಕಳ ತಲೆಯೂ ತಿರುಗಿತು. ನಮ್ಮ ಪುಟ್ಟಶಾಮಿರಾಯರು ಅವರ ಮನೆಗೆ ಹೋಗಿಬರುವುದು ಮೊದಲಾಯಿತು. ಮೊದಲು ಗುಪ್ತವಾಗಿ—ಕದ್ದು ಕದ್ದು—ಕೊನೆಗೆ ರಾಜಾ ರೋಷ........ಒಂದು ದಿನ ಈ ಬೀಗತನ ನಿನ್ನ ಅಳಿಯನ ಕಣ್ಣಿಗೆ ಬಿತ್ತು.

ಅವನಿಗೂ ಚೆನ್ನಿ—ಚೆನ್ನಿ ತಾಯಿಗೂ ಗಂಟಲು ಹರಿಯುವಷ್ಟು ವ್ಯಾಜ್ಯ ವಾಯಿತು. ಚೆನ್ನಿ ಖಂಡಿತವಾಗಿ ಹೇಳಿಯೇ ಬಿಟ್ಟಳು. 'ನಾಳಿನಿಂದ ಇಲ್ಲಿ ಬರ್ಬೇಡಿ ಬುದ್ಧಿ.' ಅಳಿಯದೇವರು ಸಪ್ಪೆಮುಖ ಹಾಕಿಕೊಂಡು ಮನೆಗೆ ಹೋದರು.'

'ಚೆನ್ನಿಯನ್ನೇನು ಮಾಡಿದಿರಿ.'

'ಪುಟ್ಟಸಾಮಿ ಅವಳನ್ನು ಬಳ್ಳಾರಿಗೆ ಸಾಗಿಸಿದ. ಅಲ್ಲಿ ಅವನ ಸ್ನೇಹಿತ ನೊಬ್ಬನಿಗೆ ಅವಳನ್ನು ದಸರಾ ಇನಾಂ ಕೊಟ್ಟು ಬಂದ.'

'ಇದು ನಿಜವೇ ಅನ್ನಿಸುತ್ತೆ.'

'ಮುಳ್ಳನ್ನು ಕೀಳಬೇಕಾದರೆ ಮುಳ್ಳಿನಿಂದಲೇ ಸಾಧ್ಯ. ಕಾಮಕ್ಕೆ ಕಾಮವೇ ಅಗ್ನಿಕುಂಡ. ಇನ್ನು ನಾನು ಊರಿಗೆ ಹೊರಡುತ್ತೇನೆ. ನಿನ್ನ ಉಡುಗೊರೆ ಬೇಗ ಬರಲಿ.'

ವೆಂಕಣ್ಣನ ಬಾಯಲ್ಲಿ ಮಾತು ಹೊರಡಲಿಲ್ಲ.

'ಮಾರಾಯ—ಮನೆಯೇ ನಿನ್ನದು. ಏನು ಬೇಕಾದರೂ ತೆಗೆದುಕೊ.'

'ಏನೂ ಬೇಡಯ್ಯಾ—ನಾಲ್ಕು ಒಳ್ಳೆ ಎಳನೀರು ತರಿಸು' ಎಂದ.

ಶ್ರೀನಿವಾಸನ ತಾಯಿ ತಿರುಪತಿ ವೆಂಕಟಾಚಲಪತಿಗೆ ಮುಡುಪು ಕಟ್ಟಿಟ್ಟಿದ್ದರು. ಮಗನಿಗೆ ವಿವೇಕ ಬಂದು, ಮನೆಗೆ ಸೊಸೆ ಬಂದದ್ದು ತಿರುಪತಿ ತಿಮ್ಮಪ್ಪನ ದಯೆಯಿಂದ ಎಂದು ಭಾವಿಸಿ ಅವರು ಮಗ ಸೊಸೆ ಯೊಂದಿಗೆ ತಿರುಪತಿ ಯಾತ್ರೆ ಹೊರಟರು. ಇದನ್ನು ಕೇಳಿ ಗುಂಡ ಗಹಗಹಿಸಿ ನಕ್ಕ.

# ಕನ್ಯಾಮಣಿ

[ಪ್ರಸಿದ್ಧ ಫ್ರೆಂಚ್ ಕಥೆಗಾರನಾದ ಎಮಿಲ್ ಜೋಲಾನ 'Maid of Dauber" ಕಥಾನುವಾದ. ಜೋಲಾ (೧೮೪೦-೧೯೦೨) ನಿಸರ್ಗ ಸಂಪ್ರದಾಯವನ್ನು ಫ್ರೆಂಚ್ ಸಾಹಿತ್ಯದಲ್ಲಿ ಬೆಳೆಸಿದ. ಇವನ 'ನಾನಾ' ಕಾದಂಬರಿ ಜಗತ್ತಿನ ಪ್ರಸಿದ್ಧ ಕಾದಂಬರಿಗಳಲ್ಲಿ ಸ್ಥಾನ ಗಳಿಸಿದೆ. ಜೋಲಾ 'ಲೂರ್ಡ್ಸ್, ರೋಮ್, ಪ್ಯಾರಿ' ಎಂಬ ಮೂರು ಕಾದಂಬರಿಗಳಲ್ಲಿ ಒಬ್ಬ ಫ್ರೆಂಚ್ ಪಾದ್ರಿ ಕಟುಧರ್ಮದಿಂದ ಹೈತುಕವಾದಕ್ಕೆ ಪರಿವರ್ತನೆಹೊಂದಿದ ಕಥೆಯನ್ನು ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಇಡಿಯ ಫ್ರೆಂಚ್ ಜನಾಂಗವನ್ನೇ ಅಲುಗಾಡಿಸಿದ ಡ್ರೈಫಸ್ ವ್ಯವಹಾರದಲ್ಲಿ ಜೋಲಾ ಡ್ರೈಫಸ್ಸಿನ ಭಾಗವಹಿಸಿ ಹೋರಾಡಿದ. ಆ ಕಾಲದ ಅವನ ಸಾಹಿತ್ಯ ರಚನೆಯಲ್ಲಿ ಡ್ರೈಫಸ್ ವ್ಯವಹಾರ ತುಂಬಿದೆ. ಡ್ರೈಫಸ್ ವ್ಯವಹಾರದಲ್ಲಿ ಜೋಲಾ ಮಾಡಿದ ಸೇವೆಯನ್ನು ಮತ್ತೊಬ್ಬ ಫ್ರೆಂಚ್-ಕಾದಂಬರಿಕಾರ ಅನತೋಲ್ ಫ್ರಾನ್ಸ್ ತನ್ನ ಅದ್ವಿತೀಯ 'ಪೆಂಗ್ವಿನ್ ಐಲೆಂಡ್' ಕಾದಂಬರಿಯಲ್ಲಿ ವರ್ಣಿಸಿದ್ದಾನೆ. ಜೋಲಾ ಉತ್ತಮ ಕಾದಂಬರಿಕಾರನಾಗಿ ಹೆಸರಾಗಿದ್ದಾನೆಯೇ ವಿನಾ ಶ್ರೇಷ್ಠ ತರಗತಿಯ ಕಥೆಗಾರನಾಗಿ ಪರಿಗಣಿಸಲ್ಪಟ್ಟಿಲ್ಲ. ಆದರೆ ಇವನು ಬರೆದಿರುವ ಕೆಲವು ಕಥೆಗಳು ಸಣ್ಣಕಥನಕಲೆಯ ಸಿದ್ಧಿಯನ್ನು ತೋರುತ್ತವೆ. ಅವುಗಳಲ್ಲಿ ಅತ್ಯುತ್ತಮವಾದ 'ಕನ್ಯಾಮಣಿ'ಯನ್ನು ಇಲ್ಲಿ ಅನುವಾದಿಸಿ ಕೊಡಲಾಗಿದೆ.]

---

ಅವಳಿನ್ನೂ ಹಾಸಿಗೆಯ ಮೇಲೇ ಇದ್ದಳು. ಅರ್ಧ ನಗ್ನೆ. ಮುಗುಳ್ನಗೆವೆತ್ತ ಮೊಗ ಮೃದುವಾದ ದಿಂಬಿನೊಳಗೆ ಮುಳುಗಿಹೋಗಿತ್ತು. ನಿದ್ದೆಯಿಂದ ಕಣ್ಣುಗಳು ಭಾರವಾಗಿದ್ದವು. ಕೂದಲಿನ ರಾಶಿಯಲ್ಲಿ ಒಂದು ಕೈ ಮುಚ್ಚಿಹೋಗಿತ್ತು; ಇನ್ನೊಂದು, ಹಾಸಿಗೆಯಂಚಿನಲ್ಲಿ ಅಲೆದಾಡುತ್ತಿತ್ತು. ರಾಜಕುಮಾರ ಕಿಟಿಕಿಯ ಬಳಿ ನಿಂತು ಅದರ ತೆರೆಯನ್ನು ಒಂದು ಪಕ್ಕಕ್ಕೆ ಎಳೆದ. ಒಂದು ಸಿಗಾರ್ ಹಚ್ಚಿದ್ದ, ಚಿಂತೆಯಲ್ಲಿ ಅವನ ಮನಸ್ಸು ಲೀನವಾಗಿತ್ತು.

ನಿಮಗೆಲ್ಲಾ ಆಕೆಯ ಪರಿಚಯವಿದೆ. ನಿನ್ನೆಗೆ ಆಕೆಗೆ ೨೦ ತುಂಬಿತು. ಆದರೆ ೧೯ರ ಮೇಲೆ ವಯಸ್ಸು ಹೇಳುವುದಕ್ಕಾಗುತ್ತಿರಲಿಲ್ಲ. ಅವಳ ತಲೆಯ

ಮೇಲೆ ಭವ್ಯವಾದ ಕಿರೀಟ—ಚಿನ್ನದ ಬಣ್ಣದ ರೇಷ್ಮೆಯಂತಹ ಕೂದಲು ರಾಶಿ. ಕುರುಳು ಜ್ವಾಲೆಯಂತೆ ಕುತ್ತಿಗೆಯನ್ನು ಆವರಿಸಿತ್ತು. ಒಂದೊಂದು ಎಳೆಯೂ ನೀಳವಾಗಿತ್ತು. ಗುಂಪುಗುಂಪಾಗಿದ್ದ ಗುಂಗುರು ಕೂದಲು ಭವ್ಯವಾಗಿ ಪ್ರಕಾಶಿಸುತ್ತಿತ್ತು. ಈ ಉಜ್ವಲ ಕೂದಲುರಾಶಿಯ ಮಧ್ಯೆ ಸುಂದರ, ಕೋಮಲ ಕುತ್ತಿಗೆ, ಹಾಲು [illegible]ಯಂತಹ ಬಿಳಿಯ ತೋಳುಗಳು, ತುಂಬಿದ ಮೊಲೆಗಳು ಎದ್ದು ನಿಂತಿದ್ದವು. ಆ ಮಂಜುಬಣ್ಣದ ಕುತ್ತಿಗೆಯಿಂದ ಅಜಿತ ವಿಷಯಾಸಕ್ತಿ ಎಚ್ಚರಗೊಂಡು ಕೂದಲುರಾಶಿಯಲ್ಲಿ ಇಣಿಕಿ ಹಾಕುತ್ತಿತ್ತು. ಇಲ್ಲಿ ರುದ್ರಪಶು—ಹಾಲು ಹಸುಳೆ; ಧೈರ್ಯ—ನಿಷ್ಕಾಪಟ್ಯ; ಅಗ್ನಿಚುಂಬನವನ್ನು ಉದ್ರೇಕಿಸುವ ಮಾದಕತೆ ಮನೆ ಮಾಡಿದ್ದವು.

ಆವಳು ಸುಂದರಿಯೆ? ಹೇಳಲು ಕಷ್ಟಸಾಧ್ಯ! ಆವಳ ಮುಖ ಕೂದಲುರಾಶಿಯಲ್ಲಿ ಮುಚ್ಚಿಹೋಗಿದೆ. ಅವಳಿಗೆ ಸಣ್ಣ ಹಣೆ, ನೀಳವಾದ ಬೂದು ಕಣ್ಣುಗಳು ಇದ್ದಿರಬೇಕು. ಅವಳ ಮೂಗು ಕೊಂಕು ಡೊಂಕು, ಸ್ವೇಚ್ಛಾಪ್ರವೃತ್ತಿಯ ಚಿಹ್ನೆ; ಆವಳ ಬಾಯಿ ದೊಡ್ಡದು, ತುಟಿಗಳು ಗುಲಾಬಿ ಬಣ್ಣ.

ಮಿಕ್ಕವುಗಳನ್ನು ಕಟ್ಟಿಕೊಂಡೇನು ಮಾಡುವುದು? ಅವಳ ಅಂಗಾಂಗಗಳನ್ನು ಪೃಥಕ್ಕರಿಸಿ, ಮುಖಮಾಟವನ್ನು ನಿರ್ಧರಿಸುವುದಕ್ಕಾಗುತ್ತಿರಲಿಲ್ಲ. ಸಬಲ ಮದ್ಯದಂತೆ ಅವಳು ನೋಡಿದೊಡನೆಯೇ ಮತ್ತು ಬರಿಸುತ್ತಾಳೆ. ನೀವು ಕಾಣುವುದೆಲ್ಲಾ ಉರಿಯುವ ಕೆಂಪುಜ್ವಾಲೆಯಲ್ಲಿ ಒಂದು ಬಿಳಿರೇಖು, ಒಂದು ಗುಲಾಬಿ ನಗೆ; ಅವಳ ಕಣ್ಣುಗಳು ಬಿಸಿಲಿನಲ್ಲಿ ಝಳಪಿಸಿದ ಬೆಳ್ಳಿಯ ಹಾಗೆ. ಅವಳ ಪರಿಪೂರ್ಣತೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಲು ನಿಮಗೆ ವ್ಯವಧಾನವೇ ದೊರೆಯುವುದಿಲ್ಲ. ಮಧ್ಯಮ ಆಕಾರ—ನಡೆಯಲ್ಲಿ ಸ್ವಲ್ಪ ಮಂದ. ಆವಳ ಕೈಕಾಲುಗಳು ಸಣ್ಣ ಹುಡುಗಿಯನ್ನು ಹೋಲುತ್ತವೆ. ಅವಳ ದೇಹವೆಲ್ಲಾ ವಿಷಯಾಸಕ್ತಿಯ ಆಲಸ್ಯವನ್ನು ಸೂಚಿಸುತ್ತದೆ. ಅವಳ ಬರಿತೋಳು ದುಂಡನೆಯ ಆಕಾರದಿಂದ ಮೆರೆದು ಆಸೆಯ ಆವೇಗವನ್ನು ಹುಟ್ಟಿಸುತ್ತದೆ. ಅವಳು ಮೋಸಂಜೆಗಳ ರಾಣಿ; ಒಂದೇ ದಿನ ಬಾಳುವ ಪ್ರೇಮದ ಅಧಿಷ್ಠಾನ ದೇವತೆ.

ಸ್ವಲ್ಪ ಬಾಗಿದ ಎಡತೋಳಿನ ಮೇಲೆ ಮಲಗಿದ್ದಾಳೆ. ಇವೇ ಏಳುವಳು,

ಮೂಡುತ್ತಿರುವ ಸೂರ್ಯರಶ್ಮಿಗೆ ಕಣ್ಣುಗಳನ್ನು ಸುಪರಿಚಿತಗೊಳಿಸಲು ಅಲಿಗಳನ್ನು ಅರ್ಧತೆರೆದು ಎದುರಿಗಿದ್ದ ತೆಳು ನೀಲಿಯ ತೆರೆಗಳನ್ನು ನೋಡುತ್ತಿದ್ದಾಳೆ. ತನ್ನ ದಿಂಬಿನ ಲೇಸುಗಳ ಮಧ್ಯೆ ಮೈಮರೆತು ಮಲಗಿದ್ದಾಳೆ. ಚಿವರಿನಿಂದ ಅವಳ ದೇಹ ಮುಳುಗಿದೆ. ಜಾಗೃತಿಯ ಮಧುರ ಆಲಸ್ಯ ಆವಳನ್ನು ತುಂಬಿದೆ. ಕೋಮಲವಾಗಿ ಬಿಡುತ್ತಿದ್ದ ಉಸಿರಿನ ಚಲನವಲನವಲ್ಲದೆ ಅವಳ ಚಾಚಿದ ದೇಹ ಯಾವ ಚಲನವನ್ನೂ ಕಾಣದು. ಇರುಳಂಗಿ (Night gown) ತೆರೆದಿದ್ದ ಕಡೆಗಳಲ್ಲಿ ಗುಲಾಬಿ ವರ್ಣದ ಅವಳ ಮಾಂಸ ಖಂಡಗಳು ಕಾಣುತ್ತಿವೆ. ಈ ಹಾಸಿಗೆ, ಇದರ ಮೇಲಿದ್ದ ಹೆಣ್ಣು ಇವುಗಳಿಗಿಂತ ವೈಭವಯುಕ್ತವಾದುದು ಪ್ರಾಯಶಃ ಯಾವದೂ ಇರಲಾರದು. ದೇವ ಹಂಸ ತನಗೆ ಯೋಗ್ಯವಾದ ಗೂಡನ್ನು ದೊರಕಿಸಿಕೊಂಡಿತ್ತು.

ಶಯ್ಯಾಗೃಹ ಸ್ನಿಗ್ಧ ನೀಲದ ಆಡುಂಬೊಲವಾಗಿತ್ತು. ಬಣ್ಣ ಮತ್ತು ಸೌಗಂಧ ಆಕರ್ಷಕವಾಗಿದ್ದವು. ಗಾಳಿ ಶೀತಲವಾಗಿ ನವಚೈತನ್ಯವನ್ನು ಹುಟ್ಟಿಸುತ್ತಿತ್ತು. ತೆರೆಗಳು ಪರಿಪರಿಯಾಗಿ ಆಲಸ್ಯದಿಂದ ನಿಂತಿದ್ದವು. ಸತ್‌ರಂಜಿ ನೆಲದ ಮೇಲೆ ಮೂಕ ಬಧಿರರ ಹಾಗೆ ಬಿದ್ದಿತ್ತು. ಈ ದೇವಾಲಯದ ಶಾಂತಿ, ದೀಪಗಳ ಸೌಮ್ಯಕಳೆ, ನೆರಳುಗಳ ತಾರತಮ್ಯ ಜ್ಞಾನ, ಅಲಂಕಾರಗಳ ಪರಿಶುದ್ಧತೆ, ತನ್ನಲ್ಲಿ ಕಲಾವಿದನ ಲಾವಣ್ಯ, ರಾಣಿಯ ಸೊಬಗನ್ನು ಮೇಳವಿಸಿದ ದೇವತೆಯನ್ನು ಜ್ಞಾಪಕಕ್ಕೆ ತರುತ್ತಿತ್ತು. ಖಂಡಿತವಾಗಿ ಆಕೆ ಹಾಲಿನ ಸ್ನಾನದ ಮೇಲೆ ಬೆಳೆದಿರಬೇಕು. ಅವಳ ಜೀವನದ ಉದಾತ್ತ ಆಲಸ್ಯ ಅವಳ ಅಂಗಾಂಗಗಳಲ್ಲಿ ಮಿಡಿಯುತ್ತಿತ್ತು. ಆದರೆ ಅವಳ ಆತ್ಮನಲ್ಲಿ ಅದೇ ಪರಿಶುದ್ಧತೆ ಮೂಡಿದ್ದಿತೇ?

ಹಾದಿಯಲ್ಲಿ ಒಂದು ಕುದುರೆ ಕಾಲು ಜಾರಿ ಬಿತ್ತು. ಅದನ್ನು ಜನ ಎತ್ತಿ ನಿಲ್ಲಿಸುತ್ತಿದ್ದರು. ರಾಜಕುಮಾರ ಆ ನೋಟವನ್ನು ನೋಡುತ್ತ ತನ್ನ ಸಿಗಾರ್ ಮುಗಿಸುತ್ತಿದ್ದ.

ಸುಂದರಿ ಏಳುತ್ತಿದ್ದಳು. ಈಗ ಪೂರ್ತಿ ಕಣ್ಣು ಬಿಟ್ಟಿದ್ದಾಳೆ. ಆದರೂ ನೀರವ—ಅಲುಗಾಡಲಿಲ್ಲ. ಮನಸ್ಸು ಎಚ್ಚೆತ್ತಿದೆ, ದೇಹ ಮಲಗಿದೆ. ಅವಳಿಗೆ ಕನಸು. ಯಾವ ಗಹನ ಗುರಿಗೆ ಅವಳ ಮನಸ್ಸು ಹಾರಿದೆ? ಯಾವ ದೇವ ಶಂಡ ಅವಳ ಮುಂದೆ ನಡೆದು ಈ ಸ್ವರ್ಗೀಯ ನಗೆಯನ್ನು ಅವಳ ಮೊಗದಲ್ಲಿ

ಬರಿಸಿದೆ? ಯಾವ ಯೋಜನೆ, ಯಾವ ಕರ್ತವ್ಯವನ್ನು ಅವಳು ಯೋಚಿಸುತ್ತಿರಬಹುದು? ಯಾವ ವಿಚಿತ್ರ ವಿಷಯ ಅವಳಲ್ಲಿ ಈ ಅಚ್ಚರಿಯನ್ನುಂಟು ಮಾಡಿದೆ? ಅವನಿನ್ನೂ ಅಲುಗಾಡಲಿಲ್ಲ. ಹಾಗೇ ತನ್ನ ಕನಸುಗಳನ್ನು ಪಾಲಿಸುತ್ತಾ ಮಲಗಿದ್ದಾಳೆ.

ಯಾವದೊ ಅವ್ಯಕ್ತ ಕರೆಗೆ ಕಿವಿಗೊಟ್ಟಂತೆ ಅವಳು ಲವಲವಿಕೆಯಿಂದ ಎದ್ದು ನಿಂತಳು. ತನ್ನ ಕೂದಲುರಾಶಿಯನ್ನು ಹಿಂದೆ ದೂಡಿದಳು. ತನ್ನ ಲೇಸುಗಳನ್ನು ಕೂಡಿಸಿ, ಕಾಲಿನಲ್ಲಿ ಮಖಮಲ್ಲು ಮೋಜಗಳನ್ನು ಮೆಟ್ಟಿ ಅರ್ಧ ಬಾಗಿ ತುಂಟ ಮಗುವಿನ ಹಾಗೆ ನಿಶ್ಯಬ್ದವಾಗಿ ಆದರೆ ತೀವ್ರವಾಗಿ ಬಾಗಿಲು ತೆರೆದು—ಮಾಯವಾದಳು.

ರಾಜಕುಮಾರ ತೃಪ್ತಿಯಿಂದ ತನ್ನ ಸಿಗಾರ್ ತುಂಡನ್ನು ಒಗೆದ. ಬೀದಿಯಲ್ಲಿ ಬಿದ್ದಿದ್ದ ಕುದುರೆ ಮೇಲಕ್ಕೆದ್ದಿತ್ತು, ಚಬಕಿನ ಹೊಡೆತ ಅದನ್ನು ಮತ್ತೆ ಕಾಲುಗಳ ಮೇಲೆ ನಿಲ್ಲಿಸಿತ್ತು. ರಾಜಕುಮಾರ ತಿರುಗಿ ಬರಿದಾದ ಹಾಸಿಗೆಯನ್ನು ನೋಡಿದ. ಅದನ್ನೇ ಕ್ಷಣಕಾಲ ನೋಡಿ, ಮೆಲ್ಲನೆ ಸರಿದು ಹಾಸಿಗೆಯಂಚಿನಲ್ಲಿ ಕುಳಿತು ತೆಳು ನೀಲ ತೆರೆಗಳನ್ನು ಅವನು ನೋಡ ತೊಡಗಿದ.

ಹೆಣ್ಣಿನ ಮುಖ ಸಮಸ್ಯಾಮಯವಾಗಿತ್ತು. ರಾಜಕುಮಾರನ ಮುಖ ತನ್ನ ಒಳಗುಟ್ಟನ್ನು ಎತ್ತಿ ತೋರುವ ಚಿಲುಮೆಯಂತೆ ನಿರ್ಮಲವಾಗಿತ್ತು. ರಾಜಕುಮಾರ ತೆರೆಯನ್ನು ಪರೀಕ್ಷಿಸುತ್ತಾ ಗಜಕ್ಕೆ ಎಷ್ಟು ಬೆಲೆಯಾಗಬಹುದೆಂದು ಲೆಕ್ಕ ಹಾಕುತ್ತಿದ್ದ. ಕೂಡಿ ಕಳೆದು ಕೊನೆಗೆ ಒಂದು ದೊಡ್ಡ ಅಂಕೆಯನ್ನು ನಿರ್ಣಯಿಸಿದ. ಅದೇ ವಿಚಾರಸರಣಿಯನ್ನು ಮುಂದುವರಿಸಿ ಶಯ್ಯಾಗೃಹದ ಬೆಲೆ ಕಟ್ಟತೊಡಗಿ ಒಂದು ಭಾರಿ ಅಂಕೆಯನ್ನು ನಿರ್ಣಯಿಸಿದ.

ಹಾಸಿಗೆಯ ಮೇಲೆ ಕೈಯಿಟ್ಟಿದ್ದ—ದಿಂಬಿನ ಮೇಲೆ ಮೊಣಕೈಯೂರಿದ್ದ. ಆ ಸ್ಥಳ ಬಿಸಿಯಾಗಿತ್ತು. ದೇವಾಲಯವನ್ನು ಮರೆತು ರಾಜಕುಮಾರ ವಿಗ್ರಹವನ್ನು ಕುರಿತು ಆಲೋಚಿಸತೊಡಗಿದ. ಸುಂದರಿಯಿಂದ ಪರಿತ್ಯಕ್ತವಾದ ಹಾಸಿಗೆ ಧರಿಸಿರುವ ವಿಷಯದ ಅಕ್ರಮತೆಯನ್ನು ಗಮನಿಸುತ್ತಾ, ಹಾಸಿಗೆಯ ಮೇಲೆ ದೊರೆತ ಒಂದು ಚಿನ್ನದ ಕೂದಲನ್ನು ಎತ್ತಿಕೊಂಡು, ಈ ಹೆಣ್ಣಿನ ಬಗ್ಗೆ ಚಿಂತಾಮಗ್ನನಾದ. ಎರಡು ಭಾವಗಳ ಮೇಳ. ಹೆಣ್ಣು

ಶಯ್ಯಾಗೃಹ; ಹೆಣ್ಣು, ಕೋಣೆಯ ಅಲಂಕಾರ; ತೆರೆಗಳು, ಸತ್‌ರಂಜಿ— ಹೀಗೆ ಜತೆಜತೆಯಾಗಿ ವಿಚಾರಗಳು ಅವನ ತಲೆ ತುಂಬಿದವು. ಪ್ರತಿಯೊಂದು ಸಮರಸವಾಗಿತ್ತು.

ರಾಜಕುಮಾರನ ಭಾವನಾವಿಲಾಸ ಬದಲಾಯಿಸಿತು. ಮಾನವ ಭಾವನೆಯ ಅವರ್ಣನೀಯ ರಹಸ್ಯಗಳಲ್ಲೊಂದೆಂಬಂತೆ ಅವನ ವಿಚಾರ ಕಾಲಿನ ಮೋಜಿನ ಕಡೆ ಹರಿಯಿತು. ಈ ವಿಚಾರದ ಸೂಚನೆ ಯಾವದರಿಂದಲೂ ಬರದಿದ್ದರೂ, ಮೋಜಿನ ವಿಚಾರ ಅವನ ಮನಸ್ಸನ್ನು ಪೂರ್ಣವಾಗಿ ಮುತ್ತಿತು. ಈ ಮೂರು ತಿಂಗಳಿಂದ ತಾನು ಕೋಣೆಯನ್ನು ಬಿಟ್ಟು ಹೋದ ಕೂಡಲೆ ಮೋಜು ಪಾಲಿಷ್‌ಗೊಂಡು ಶುದ್ಧವಾಗುತ್ತಿದ್ದುದನ್ನು ಜ್ಞಾಪಿಸಿಕೊಂಡ. ಈ ಸ್ಮೃತಿಯನ್ನೇ ಮೆಲುಕು ಹಾಕುತ್ತ ಕುಳಿತ.

ಕೋಣೆ ಮನೋಹರವಾಗಿತ್ತು. ಹೆಣ್ಣು ದೇವತೆಯಂತಿದ್ದಳು. ರಾಜಕುಮಾರ ಮತ್ತೆ ನೀಲಿ ತೆರೆಗಳನ್ನೂ, ಚಿನ್ನದ ಕೂದಲನ್ನೂ ನೋಡಿದ. ತನ್ನನ್ನೇ ತಾನು ಮೆಚ್ಚಿಕೊಂಡ. ವಿಧಿ ಮಾಡಿದ್ದ ಒಂದು ದೊಡ್ಡ ತಪ್ಪನ್ನು ತಾನು ತಿದ್ದಿದ್ದ. ಗಟಾರ ಶುದ್ಧಿ ಮಾಡುವವನ ಮನೆಯಲ್ಲಿ ಹುಟ್ಟಿಸಿ, ದ್ವಾರಪಾಲಿಕೆಯ ವೃತ್ತಿಯಲ್ಲಿ ಈ ಹೆಣ್ಣನ್ನು ವಿಧಿ ನಿಲ್ಲಿಸಿತ್ತು; ತಾನು ಅವಳನ್ನು ಕರೆತಂದು ಸಾವಿರಾರು ರೂಪಾಯಿಗಳನ್ನು ವ್ಯಯಮಾಡಿ ಈ ವೈಭವದಲ್ಲಿ ನಿಲ್ಲಿಸಿದ್ದ. ಅವನು ಏಕಾಂಗಿ. ಎದ್ದು ನಾಲ್ಕು ಹೆಜ್ಜೆ ಮುಂದೆ ಹೋದ. ಪ್ರತಿನಿತ್ಯ ಬೆಳಿಗ್ಗೆ ಕಾಲುಗಂಟೆ ಹೀಗೆ ತಾನು ಏಕಾಂಗಿಯಾಗಿರುತ್ತಿದ್ದುದನ್ನು ಜ್ಞಾಪಿಸಿಕೊಂಡ. ಏನೂ ಕುತೂಹಲವಿಲ್ಲದೆ, ಸುಮ್ಮನೆ ಏನಾದರೂ ಮಾಡಬೇಕೆಂಬ ಹವ್ಯಾಸಬಲದಿಂದ ಬಾಗಿಲು ತೆಗೆದು—ಮಾಯವಾದ.

ಕೋಣೆಗಳ ಸರದಂತಿದ್ದ ಮನೆಯೊಳಗೆ ನಡೆದ. ದಾರಿಯಲ್ಲಿ ಯಾರೂ ಸಂಧಿಸಲಿಲ್ಲ. ಹಿಂದಿರುಗುವಾಗ ಬಲವಾಗಿ ಬ್ರಷ್ ಹೊಡೆಯುತ್ತಿರುವ ಶಬ್ದ ಕೇಳಿಸಿತು. 'ಆಳುಮಗಳು ಇರಬಹುದು, ಯಜಮಾನತಿ ಎಲ್ಲಿ ಎಂದು ಕೇಳುವ' ಎಂದುಕೊಂಡು ಬಾಗಿಲು ತೆರೆದು ತಲೆಯಿಟ್ಟ. ಸ್ತಂಭೀಭೂತನಾಗಿ ಹೊಸ್ತಿಲ ಮೇಲೆ ನಿಂತ—ನೋಟ ಅವನನ್ನು ವಿಸ್ಮೃತಿಗೊಳಿಸಿತ್ತು.

ಆ ಕೋಣೆ ಬಹಳ ಸಣ್ಣದಾಗಿತ್ತು. ಅದರ ಗೋಡೆಗಳಿಗೆ ಹಳದಿ ಹಚ್ಚಿತ್ತು. ಒಂದು ಮೂಲೆಯಲ್ಲಿ ಒಂದು ಪಾತ್ರೆ, ಒಂದು ದೊಡ್ಡ ಸ್ಪಂಜು;

ಇನ್ನೊಂದು ಮೂಲೆಯಲ್ಲಿ ಒಂದು ಪರಕೆ, ಧೂಳು ಹೊಡೆಯುವ ಬಟ್ಟೆ. ಸಣ್ಣ ಕಿಟಕಿಯೊಂದು ಅಪೂರ್ಣ ಬೆಳಕನ್ನು ನೀಡುತ್ತಿತ್ತು. ಅಲ್ಲಿನ ಗಾಳಿ ಒದ್ದೆಮುದ್ದೆಯಾಗಿತ್ತು.

ಕೋಣೆಯ ಮಧ್ಯೆ, ಸಣ್ಣ ಜಮಖಾನೆಯೊಂದರ ಮೇಲೆ ಕಾಲುಗಳನ್ನು ಕೆಳಗೆ ಜೋಡಿಸಿ ಚಿನ್ನದ ಕೂದಲಿನ ಸುಂದರಿ ಕುಳಿತಿದ್ದಳು. ಅವಳ ಬಲಗಡೆ ಬೂಟ್ಸ್ ಪಾಲಿಷಿನ ಒಂದು ಡಬ್ಬ, ಬಣ್ಣ ತುಂಬಿದ ಬ್ರಷ್. ಅವಳ ಎಡಗಡೆ ಮಿರುಮಿರುಗುವ ಬಣ್ಣ ಹಚ್ಚಿದ ಒಂದು ಜೋಡು. ಅದು ಕನ್ನಡಿಯಂತೆ ಹೊಳೆಯುತ್ತ ಜೋಡಿಗೆ ಬಣ್ಣ ಹಚ್ಚುವ ಕಲೆಯ ಪ್ರೌಢಿಮೆಯನ್ನು ಸಾರುತ್ತಿತ್ತು. ಅವಳ ಸುತ್ತ ಧೂಳಿನ ಕಣಗಳು. ನಯವಾದ ಬೂದು ಧೂಳಿನ ರಾಶಿ. ಸ್ವಲ್ಪ ದೂರದಲ್ಲಿ ಜೋಡಿನ ಮಣ್ಣನ್ನು ಕೆರೆಯಲುಪಯೋಗಿಸುವ ಚಾಕು ಬಿದ್ದಿತ್ತು. ಇನ್ನೊಂದು ಜೋಡನ್ನು ಕೈಯಲ್ಲಿ ಹಿಡಿದಿದ್ದಾಳೆ. ಅದರೊಳಗಡೆ ಅವಳ ಕೈ ತೂರಿದೆ. ಅವಳ ಪುಟ್ಟ ಬೆರಳುಗಳು ಒಂದು ಗಟ್ಟಿ ಬ್ರಷನ್ನು ಹಿಡಿದಿವೆ. ಅದರಿಂದ ಮಬ್ಬುಗಲು ಹಿಂದೆಗೆಯುತ್ತಿದ್ದ ಜೋಡನ್ನು ಬಲವಾಗಿ ತಿಕ್ಕುತ್ತಿದ್ದಾಳೆ.

ಅವಳ ಲಂಗದ ಲೇಸುಗಳು ಸುತ್ತುಗಟ್ಟಿವೆ. ಅವಳ ಕೆನ್ನೆಯ ಮೇಲೆ ಬುಜದ ಮೇಲೆ ಬೆವರುಹನಿಗಳು ಕಾಣಿಸಿಕೊಂಡಿವೆ. ಮುಖದ ಮೇಲೆ ಬರುತ್ತಿದ್ದ ಸುಳಿಗುರುಳನ್ನು ಹಿಂದೂಡಲು ಆಗಾಗ್ಗೆ ತನ್ನ ಕೆಲಸವನ್ನು ನಿಲ್ಲಿಸುತ್ತಾಳೆ. ಅಮೃತಶಿಲೆಯಂತಹ ಅವಳ ಎದೆ ಕೈಗಳು ಬಣ್ಣದ ಚುಕ್ಕೆಗಳನ್ನು ಹೊತ್ತಿವೆ. ಬಣ್ಣ ಉಜ್ಜುವ ರಭಸದಲ್ಲಿ ಕೆಲವು ಕಣಗಳು—ಸೂಜಿಯಂತಹವು, ಜೇಳಿಯಂತಹವು ಅವಳ ಎದೆ ಕೈಗಳ ಮೇಲೆ ಬಂದು ಕುಳಿತಿವೆ.

ಅವುಡುಗಚ್ಚಿದ್ದಾಳೆ. ಕಣ್ಣುಗಳು ತೇವಗೊಂಡಿವೆ. ಆದರೂ ಮುಖದಲ್ಲಿ ಎಳೆನಗೆ. ಜೋಡಿನ ಮೇಲೆ ಪ್ರೀತಿಯಿಂದ ಬಾಗುತ್ತಾಳೆ—ಬ್ರಷ್ ಹೊಡೆಯುವುದಕ್ಕೋ ನೇವರಿಸುವುದಕ್ಕೋ ಎಂದು ಸಂದೇಹಪಡುವಂತೆ! ತನ್ನ ಕೆಲಸದಲ್ಲಿ ನಿಮಗ್ನಳಾಗಿ, ಅದರ ಅನಂತ ಸುಖದಲ್ಲಿ ಮೈಮರೆತಿದ್ದಾಳೆ. ಸಣ್ಣ ಕಿಟಕಿಯಿಂದ ಶೀತಲ ಬೆಳಕು ಅವಳ ಮೇಲೆ ಬೀಳುತ್ತಿದೆ. ಒಂದು ದೊಡ್ಡ ರಶ್ಮಿ ಅವಳ ಮೇಲೆ ಹರಿದು, ಕೂದಲನ್ನು ಕೆಣಕಿ, ಮೈಯ ಗುಲಾಬಿ ಬಣ್ಣವನ್ನು ಬೆಳಗಿಸಿ, ಅವಳ ಲೇಸುಗಳನ್ನು ನೀಲಿಗೊಳಿಸಿದೆ. ಅದು

ಲಾವಣ್ಯದ ವೈಭವವನ್ನೂ, ಮಣ್ಣಿನ ಸುಕೋಮಲತೆಯನ್ನೂ ಸಾರಿದೆ.

ಅವಳು ಸಂತೋಷದಿಂದಿದ್ದಾಳೆ. ಅವಳು ಅವಳ ತಂದೆಯ ಮಗಳು, ತಾಯಿಯ ಸತ್ಪುತ್ರಿ. ಪ್ರತಿದಿನ ಎದ್ದಾಗ ಅವಳಿಗೆ ತನ್ನ ಹಿಂದಿನ ಬಾಳಿನ ನೆನಪು. ಬಾಲ್ಯದಲ್ಲಿ ತಾನು ಹೊಲಸು ಮೆಟ್ಟಿಲ ಮೇಲೆ, ಅತಿಥಿಗಳ ಹಳೆಯ ಜೋಡುಗಳ ಜತೆಯಲ್ಲಿ ಕಳೆದ ಬಾಳಿನ ನೆನಪು. ಅವಳಿಗೆ ಕನಸು........ ಅವುಗಳ ಕನಸು! ಏನನ್ನಾದರೂ ಶುದ್ಧಿ ಮಾಡಬೇಕೆಂಬ ಆಸೆ ಆವರಿಸುತ್ತದೆ. ಮೊದಲಿನ ಹಾಗೆ ಹಲವಾರು ಜೋಡುಗಳಿಲ್ಲದಿರಬಹುದು. ಒಂದೇ ಜತೆಯಾದರೂ ಚಿಂತೆಯಿಲ್ಲ. ಕೆಲವರಿಗೆ ಹೂವಿನ ಆಸೆಯಿದ್ದ ಹಾಗೆ. ಅವಳಿಗೆ ಜೋಡಿಗೆ ಪಾಲಿಷ್ ಹಾಕುವ ಆಸೆ. ಇದೇ ಅವಳ ರಹಸ್ಯ. ತನ್ನ ಹುಲು ಆಸೆಯನ್ನು ಕಂಡು ಅವಳಿಗೆ ತಿರಸ್ಕಾರ ಆದರೆ ಅದರ ಪರಿಪೂರ್ಣತೆಯ ಆನಂದ ಮಿಕ್ಕೆಲ್ಲವನ್ನು ಮರೆಸುತ್ತಿತ್ತು. ಪ್ರತಿದಿನ ಎದ್ದ ಕೂಡಲೆ ತನ್ನ ಬಿಳಿಯ ಬೆರಳುಗಳಿಂದ ಜೋಡಿನ ತಳ ಕೆರೆದು, ಅದಕ್ಕೆ ಬಣ್ಣ ಹಾಕುವ ಕೆಲಸಕ್ಕೆ ಅವಳು ಧಾವಿಸುತ್ತಿದ್ದಳು. ರಾಜಕುಮಾರ ಅವಳ ಬುಜವನ್ನು ಮೆಲ್ಲನೆ ಮುಟ್ಟಿದ. ಅವಳು ಅಚ್ಚರಿಯಿಂದ ಮೇಲೇಳಲು ತನ್ನ ಜೋಡನ್ನು ಅವಳ ಕೈಯಿಂದ ತೆಗೆದುಕೊಂಡ........ಕಾಲಿಗೆ ಹಾಕಿಕೊಂಡ........ಐದಾಣೆ ಚಿಲ್ಲರೆಯನ್ನು ಅವಳಿಗೊಗೆದು ಮೆಲ್ಲನೆ ಹಿಂದಿರುಗಿದ.

ಅಂದು ಮಧ್ಯಾಹ್ನ ಸುಂದರಿಗೆ ಭಯಂಕರ ಕೋಪ ಬಂತು. ಮನಸ್ಸಿಗೆ ಹೇಳಲಾಗದಷ್ಟು ಬೇಸರವಾಯಿತು. ನೂರು ರೂಪಾಯಿಗಳ ತಪ್ಪು ಕಾಣಿಕೆ ಬೇಕೆಂದಳು. ಹೌದು! ಅವಳಿಗೆ ಕೊಡಬೇಕಾದ ಬಾಕಿಯಿದೆಯೆಂದು ಒಪ್ಪಿಕೊಂಡ. ಮೂರು ತಿಂಗಳು ಜೋಡಿಗೆ ಬಣ್ಣ ಹಾಕಿದ ಕೂಲಿ—ದಿನಕ್ಕೆ ಐದಾಣೆಯಂತೆ—ಸುಮಾರು ೪೭ ರೂಪಾಯಿ ಆಯಿತು. ಅದನ್ನು ತನ್ನ ಆಳಿನ ಕೈಯಲ್ಲಿ ಅವಳಿಗೆ ಕಳುಹಿಸಿದ.

---

# ಕಣ್ಣುಮುಚ್ಚಾಲೆ

ನಮ್ಮ ಪೈಕಿಯೆಲ್ಲಾ ದೀಕ್ಷಿತ ಒಂದು ವಿಚಿತ್ರ ವ್ಯಕ್ತಿ. ಅವನ ಅಂತರಂಗವನ್ನರಿಯುವುದು ಯಾರಿಗೂ ಸಾಧ್ಯವಾಗಿರಲಿಲ್ಲ. ಅವನು ಆಡಿದ ಮಾತಿನ ಹಿಂದಿದ್ದ ಅರ್ಥವನ್ನು ಸಂಶೋಧನೆ ಮಾಡಿದ ಹೊರತೂ ಅದರ ಗುಟ್ಟು ಬಯಲಾಗುತ್ತಿರಲಿಲ್ಲ. ತನ್ನ ಭಾವನೆಯನ್ನು ತೋರಗೊಡದೆ ಇತರರ ಮನಸ್ಸನ್ನು ತಿಳಿಯುವ ಶಕ್ತಿ ಅವನಿಗೆ ಸಾಧಿಸಿತ್ತು. ಅವನು ಎಲ್ಲಿ ಹೋಗುತ್ತಾನೆ, ಏನು ಮಾಡುತ್ತಾನೆಂಬುದು ಯಾರಿಗೂ ಪತ್ತೆಯಾಗುತ್ತಿರಲಿಲ್ಲ.

ದೀಕ್ಷಿತ ಸಾಮ್ಯವಾದಿಯೆಂಬ ವಿಷಯ ಮಾತ್ರ ಎಲ್ಲರಿಗೂ ಗೊತ್ತಿತ್ತು. ಆದರೆ ಸಾಮ್ಯವಾದವನ್ನು ಅವನು ತನ್ನ ರಸಿಕ ಜೀವನದ ಹೊರಗೆ ಬಿಟ್ಟು ಕೊಟ್ಟಿರಲಿಲ್ಲ. ಬೆಳಿಗ್ಗೆಯಿಂದ ಸಂಜೆಯ ವರೆಗೂ ಸೌಂದರ್ಯವನ್ನು—ಅವನು ಯಾವದನ್ನು ಸೌಂದರ್ಯವೆಂದು ಭಾವಿಸಿದ್ದನೋ ಅದನ್ನು ಅರಸುವುದೇ ಅವನ ಕರ್ತವ್ಯವಾಗಿತ್ತು. ಅವನು ಎಲ್ಲಿ, ಯಾರಿಗೆ, ಯಾವ ಬೀದಿಯಲ್ಲಿ—ಯಾವ ಸಂದಿಗೊಂದಿಯಲ್ಲಿ ಸಿಕ್ಕುತ್ತಾನೆಂದು ಹೇಳಲಿಕ್ಕೆ ಬರುತ್ತಿರಲಿಲ್ಲ. ಅವನು ಎಲ್ಲಿ ಸಿಕ್ಕಿದರೂ ಯಾರೂ ಆಶ್ಚರ್ಯಪಡುತ್ತಿರಲಿಲ್ಲ.

ದತ್ತಣ್ಣನ ಮನೆಯ ಊಟಕ್ಕೆ ಅವನನ್ನು ಕರೆದುಕೊಂಡು ಬರುವುದಕ್ಕೆ ಕಾಮೂ ಸರ್ವ ಸಾಹಸ ಮಾಡಬೇಕಾಯಿತು. ಕಾಮೂದು ಉಡದ ಹಿಡಿತ. ಒಂದು ಕೆಲಸಕ್ಕೆ ಅವನು ಕೈಹಾಕಿದರೆ ಅದನ್ನು ನಿರ್ವಹಿಸದೆ ಬಿಡುತ್ತಿರಲಿಲ್ಲ. ದತ್ತಣ್ಣ ಹದಿನೈದು ದಿವಸ ಮುಂಚೆಯೇ ಎಲ್ಲರಿಗೂ ಆಹ್ವಾನ ಕೊಟ್ಟಿದ್ದ. ಡಿಗ್ರಿ ಪರೀಕ್ಷೆಯಲ್ಲಿ ಫಸ್ಟ್‌ಕ್ಲಾಸಿನಲ್ಲಿ ಬಂದಿದ್ದ. ಜತೆಗೆ ಅವನ ಹೆಂಡತಿಯನ್ನು ಬಿಟ್ಟು ಹೋಗಲು ಮಾವನ ಮನೆಯವರು ಬಂದಿದ್ದರು. ಎರಡು ಸಮಾರಂಭಗಳನ್ನೂ ಕೂಡಿಸಿ ಒಂದು ಭಾರಿ ಔತಣ ಏರ್ಪಾಟು ಮಾಡಿದ್ದ. ದತ್ತಣ್ಣನ ಮನೆ ಬಿಸಿಬೇಳೆ ಹುಳಿಯನ್ನಕ್ಕೆ ಪ್ರಸಿದ್ಧಿ. ಅವನು ಅಷ್ಟು ಉಪಚಾರ ಹೇಳದಿದ್ದರೂ ಯಾರೂ ಅವನ ಮನೆ ಊಟವನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ದೀಕ್ಷಿತನನ್ನು ಕರೆತರುವ ಭಾರ ಕಾಮು ವಹಿಸಿಕೊಂಡು ಕೃತಕೃತ್ಯನಾಗಿದ್ದ.

ಊಟ ಹತ್ತು ಗಂಟೆಗೆ ಮುಗಿಯಿತು. ನಾವೆಲ್ಲಾ ಹೊರಡಲಿಕ್ಕೆ ಅನುವಾದೆವು. ದತ್ತ ಒಂದು ಟಿನ್ 'ನೇವಿಕಟ್' ಸಿಗರೇಟ್ ತಂದು ಮುಂದಿಟ್ಟ.

'ಇದೇನು ಇಷ್ಟು ಅವಸರ' ಎಂದ.

'ಹತ್ತಾಯಿತಲ್ಲಪ್ಪಾ.'

'ಇರುಳೇ ಹಗಲಾಗಿರುವ ನಿಮಗೆ ಹತ್ತು ಗಂಟೆ ತಡವೇನೋ ?'

'ತಡವಲ್ಲ........ಆದರೆ........'

'ಆದರೇನು ?'

'ಬೀಗರು ಗೀಗರು ಇದ್ದಾರೆ. ಅವರನ್ನೆಲ್ಲಾ ನೀನು ವಿಚಾರಿಸಿಕೊಳ್ಳ ಬೇಕಲ್ಲ.'

'ಅದು ನಡೆದೇ ಇದೆ. ಸ್ವಲ್ಪ ತಡೆದು ಹೋಗಿ—ಒಂದೆರಡು ಸಿಗರೇಟ್ ಹಚ್ಚಿ. ಸ್ವಲ್ಪ ಹರಟೆ ಹೊಡೆಯೋಣ.'

'ಇವತ್ತು ಹರಟೆಗೆ ಕೂಡುವ ಮನಸ್ಸು ನಿನಗೆ ಹೇಗೆ ಬರುತ್ತದೋ ಕಾಣೆನಪ್ಪಾ'

ಎಂದು ದೀಕ್ಷಿತ ನುಡಿದ.

'ಏಕೆ ?'

'ಹೆಂಡತಿ—ಬಹಳ ದಿವಸಕ್ಕೆ ಮನೆಗೆ ಬಂದಿದ್ದಾಳೆ.'

'ನೀನು ರಸಿಕನಪ್ಪಾ. ಇರಲಿ, ಒಂದು ದಿವಸಕ್ಕೆ ಏನು ಪರವಾಯಿಲ್ಲ.'

ಸಿಗರೇಟ್ ಹಚ್ಚಿ ಕುಳಿತೆವು. ದೊಡ್ಡ ಊಟವಾದ ಮೇಲೆ ಸಿಗರೇಟುಗಳು ಕಣ್ಣಿಗೆ ಕಾಣದ ಹಾಗೆ ಮಾಯವಾಗುವುದು ಸ್ವಾಭಾವಿಕ.

'ಮನೆಯವರು ಯಾವಾಗ ಬಂದರು ದತ್ತಣ್ಣಾ' ಎಂದು ದೀಕ್ಷಿತ ಕೇಳಿದ.

'ಎರಡು ಮೂರು ದಿವಸವಾಯಿತು.'

'ನಾಳೆ ಬರುತ್ತಾರೆಂದು ಹದಿನೈದು ದಿವಸದ ಕೆಳಗೇ ಹೇಳಿದ್ದೆ.'

'ಏನೋ ಅನಿವಾರ್ಯ ಬಂತಂತೆ—ಬರಲು ತಡವಾಯಿತು.'

'ನಿನಗೆ ತುಂಬ ಬೇಸರವಾಗಿರಬಹುದು.'

'ಆಗದೆ ಇರುತ್ತದೆಯೋ ?'

'ಜಾಲಿನಲ್ಲಿ ಈ ಕಣ್ಣುಮುಚ್ಚಾಲೆ ಇದ್ದರೇ ಸೊಗಸು' ಎಂದು ಕಾಮು ಸೇರಿಸಿದ.

'ಹೌದು, ಮನುಷ್ಯನ ಬಾಳು ಅವನೊಂದಿಗೆ ಯಾವಾಗಲೂ ಕಣ್ಣು ಮುಚ್ಚಾಲೆ ಆಡುತ್ತಲೇ ಇರುತ್ತದೆ' ಎಂದು ನಾಭ ಬಹಳ ಗಂಭೀರವಾಗಿ ನುಡಿದ.

'ಆಚಾರ್ರು ದೊಡ್ಡ ತತ್ವವನ್ನೇ ಮುಂದಿಟ್ಟುಬಿಟ್ಟರಲ್ಲಾ.'

'ಒಂದು ದೃಶ್ಯ ಜ್ಞಾಪಕಕ್ಕೆ ಬಂತು. ಅದನ್ನು ನೆನೆದು ಹೇಳಿದೆ.'

'ಏನಪ್ಪಾ ಅದು.'

'ನಮ್ಮ ಮನೆಗೆ ಹೋಗುವ ದಾರಿ ನೋಡಿದ್ದೀರಲ್ಲಾ.'

'ನೋಡದೆ ಉಂಟೇ.'

'ಅಲ್ಲಿ ಒಂದು ಮೋಟಾರು ಗ್ಯಾರೇಜ್ ಇದೆ ನೋಡಿ—ಅದರ ಮುಂದೆ ಕೆಲವು ಅಂಗಡಿಗಳಿವೆ.'

'ಹೌದು, ಒಂದು ರೊಟ್ಟಿ ಅಂಗಡಿ, ಒಂದು ಸಿಗರೇಟ್ ಅಂಗಡಿ........'

'ಒಂದು ಸಣ್ಣ ತರಕಾರಿ ಅಂಗಡಿಯೂ ಇದೆ. ಅದರಲ್ಲಿ ಮುದುಕಿಯೊಂದು ಯಾವಾಗಲೂ ಕುಳಿತಿರುತ್ತದೆ.'

'ಹೌದು—ಹೌದು!'

'ಆ ಮುದುಕಿಗೆ ಒಂದು ಹೆಣ್ಣುಮಗುವಿತ್ತು. ಲಕ್ಷಣವಾಗಿ ಸಿಲಾಯಿಡ್ ಗೊಂಬೆ ಇದ್ದ ಹಾಗಿತ್ತು. ನಾನು ಹೋಗಿ ಬರುವ ದಾರಿಯಾದ್ದರಿಂದ ಅದನ್ನು ನಿತ್ಯ ನೋಡುತ್ತಿದ್ದೆ. ಆ ಮಗು ಬೆಳೆದು ದೊಡ್ಡದಾಯಿತು. ಅದೇ ಅಂಗಡಿಯ ಮೇಲೆ ವ್ಯಾಪಾರಕ್ಕೆ ಕೂಡುತ್ತಿತ್ತು. ಕೆಲವು ದಿವಸ ಕಳೆಯುಲು ಇದ್ದಕ್ಕಿದ್ದ ಹಾಗೆ ಮಾಯವಾಯಿತು. ಮತ್ತೆ ಕೆಲವು ದಿವಸ ಕಳೆದವು........ಅದೇ ಮಗು ಒಂದು ಸಣ್ಣ ಮಗುವನ್ನೆತ್ತಿಕೊಂಡು ಕುಳಿತಿರುತ್ತಿತ್ತು. ಮುಖ ಬಾಣಂತಿ ಮುಖವಾಗಿತ್ತು. ಒಂದೆರಡು ತಿಂಗಳು ಸಾಗಿರಬಹುದು. ಒಂದು ದಿನ ಆ ಮುದುಕಿಯ ಅಂಗಡಿಯ ಮುಂದೆ ಜನದ ಗುಜಗುಂಪಲು. ಮುದುಕಿ ಊರು ಕಿತ್ತುಹೋಗುವ ಹಾಗೆ ಹುಯ್ಯಲಿಡುತ್ತಿತ್ತು. ಏನಿರಬಹುದೆಂದು ನಾನು ನಿಂತೆ. ಒಳಗಿಂದ ಒಂದು ಹೆಣ

ತಂದರು. ಹಣೆಯ ತುಂಬ ಕುಂಕುಮ.......ದಿಟ್ಟಿಸಿ ನೋಡಿದೆ. ಅದೇ ಹುಡುಗಿ........ಅದರ ಬಾಳ ದೀಪ ನಂದಿತ್ತು.'

'ಇದರಲ್ಲಿ ಆಶ್ಚರ್ಯವೇನು ?'

'ಏನೂ ಇಲ್ಲ. ಆ ಹುಡುಗಿಯನ್ನು ನಾನು ಹತ್ತು ಹನ್ನೆರಡು ವರ್ಷಗಳಿಂದ ನೋಡುತ್ತಿದ್ದೆ. ಆ ಮೊಗ್ಗೆ ನನ್ನ ಮುಂದೆ ಬೆಳೆಯಿತು—ಅರಳಿತು—ಅಳಿಯಿತು. ಬಾಳು ಎಂತಹ ವಿಲಕ್ಷಣ ಕಣ್ಣುಮುಚ್ಚಾಲೆ ಆಡುತ್ತದೆ ಎನ್ನಿಸಿತು.'

'ನನಗೆ ಇಂತಹದೇ ಒಂದು ಅನುಭವವಾಯಿತು.'

ಎಂದು ಕಾಮೂ ಆರಂಭಿಸಿದ. ಮಾತು ಬೆಳೆದು ಬೆಳೆದು ಎಲ್ಲರೂ ಒಂದೊಂದು ಕಥೆ ಹೇಳಿದರು. ಸಿಗರೇಟ್ ಡಬ್ಬ ಅರ್ಧ ಖಾಲಿಯಾಗಿತ್ತು. ಆವರೆ ದೀಕ್ಷಿತ ತುಟಿಪಿಟಕ್ಕೆನ್ನಲಿಲ್ಲ. ಎಲ್ಲವನ್ನೂ ಕೇಳುತ್ತ ಸುಮ್ಮನೆ ಕುಳಿತಿದ್ದ. ದತ್ತ ತುಸು ಕೋಪದಿಂದಲೇ

'ನೀನು ಏನಾದರೂ ಹೇಳಯ್ಯಾ—ಎಲ್ಲರನ್ನೂ ಮಾತಿಗೆ ಹಚ್ಚಿ ಸುಮ್ಮನೆ ಕುಳಿತುಬಿಡುತ್ತೀಯಲ್ಲಾ.'

'ನುಡಿದರೆ ಮುತ್ತಿನ ಹಾರದಂತಿರಬೇಕು ಎನ್ನುವುದು ದೀಕ್ಷಿತನ ತತ್ವ. ಅವನು ನಿಮ್ಮ ಹಾಗೆ ಪೊಳ್ಳು ಮಾತು ಆಡಲ್ಲ'

ಎಂದು ನಾನು ದೀಕ್ಷಿತನ ವಕಾಲತ್ತು ವಹಿಸಿದೆ.

'ಪೊಳ್ಳು ಬೇಡದಿದ್ದರೆ ತೂಕವಾದದ್ದೆ ಹೇಳಲಿ.'

'ನಾನು ಏನು ಮಾತನಾಡಿದರೂ ಕಷ್ಟ. ಅದಕ್ಕೇ ಬಾಯಿ ಮುಚ್ಚಿಕೊಂಡು ಸುಮ್ಮನಿರುತ್ತೇನೆ. ಸುಮ್ಮನಿದ್ದರೂ ನೀವು ನನ್ನ ಬಿಡುವುದಿಲ್ಲ.'

'ನಿನ್ನ ಯಾರು ಏನು ಮಾಡಿದರಪ್ಪಾ ?'

'ಪೋಲಿ ಎನ್ನುತ್ತೀರಿ. ಆ ಮಾತು ಬಿಟ್ಟು ಬೇರೆ ನನಗೆ ಬರುವುದೇ ಇಲ್ಲ ಎಂದು ಹಾಸ್ಯಮಾಡುತ್ತೀರಿ.'

'ಇಲ್ಲ ಹೇಳಯ್ಯಾ.'

'ಪೋಲಿ ಆದರೂ ಚಿಂತೆಯಿಲ್ಲ ಹೇಳಪ್ಪಾ.'

ಎಲ್ಲರೂ ದೀಕ್ಷಿತನನ್ನು ಕಾಡುವುದಕ್ಕೆ ತೊಡಗಿದೆವು.

'ನನಗೆ ಒಂದು ಅನುಭವವಾಯಿತು........'

' ಅದನ್ನೇ ಹೇಳು.'

' ನೀವು ಪೋಲಿ ಅಂದರೂ ಚಿಂತೆಯಿಲ್ಲ, ಹೇಳಿಬಿಡುತ್ತೇನೆ.'

' ಹೀಗಿರಬೇಕು.'

' ನನ್ನ ಷಿಕಾರಿ ಪ್ರೇಮ ನಿಮಗೆಲ್ಲಾ ಗೊತ್ತೇ ಇದೆಯಲ್ಲಾ.'

' ಗೊತ್ತಿಲ್ಲದೆ ಏನು? ಜಗತ್ತಿಗೇ ಗೊತ್ತಿದೆ.'

' ಒಂದು ದಿನ ವಿಚಿತ್ರ ಅನುಭವವಾಯ್ತು. ಕೆಲವು ದಿವಸ ಈ ಷಿಕಾರಿ ಮರ್ಯಾದೆ ತರುವುದಿಲ್ಲವೆಂದು ಸುಮ್ಮನಾಗಿದ್ದೆ. ನಾನೂ ಲೋಕಾಭಿರಾಮವಾಗಿ ಬಾಳಬೇಕು ಎಂದು ನಿರ್ಧರಿಸಿದ್ದೆ. ಒಂದು ದಿನ ಮನೆ ಬಿಟ್ಟೆ—ಎದುರಿಗೆ—ಸುಮಾರು ಅರ್ಧ ಫರ್ಲಾಂಗ್ ದೂರದಲ್ಲಿ ಒಂದು ಹೆಣ್ಣು ಹೋಗುತ್ತಿತ್ತು.'

' ನಿನ್ನ ನಿರ್ಧಾರ ಗಾಳಿಗೆ ಹಾರಿ ಹೋಯಿತು.'

' ಸತ್ಯವಾಗಿ. ನೀನು ಅವಳನ್ನು ನೋಡಿದ್ದರೆ ನಿನ್ನ ಅನುಭವವೂ ಹಾಗೇ ಆಗುತ್ತಿತ್ತು.'

' ಅಲ್ಲಿಂದ ಮುಂದೆ.'

' ಹಿಂಬಾಲಿಸಿದೆ. ದಾರಿಯಲ್ಲೋ ಹಿಂಡು ಹಿಂಡು ಜನ. ಹೆಣ್ಣು ಜನಸಂದಣಿ ದಾಟಿ ಮುಂದೆ ಹೋದರೆ ಮಾತನಾಡಿಸುವ ಎಂದು ಹಿಂದೆಯೇ ಅನುಸರಿಸಿದೆ. ಗಂಟೆ ಸುಮಾರು ೧೧ ಇರಬಹುದು. ಬಿಸಿಲೇರಿತ್ತು. ಹೆಣ್ಣು ಕೂದಲನ್ನು ಗಂಟುಹಾಕಿತ್ತು. ಬಿಸಿಲಿನ ಝಳ ಕೂದಲು ಗಂಟುಗಳ ಮೇಲೆ ಬಿದ್ದು ಅದಕ್ಕೆ ಕಣ್ಣು ಕೋರಯಿಸುವ ಹೊಳಪನ್ನು ಕೊಟ್ಟಿತ್ತು. ಎತ್ತರದ ಆಳು. ಮಾಟವಾದ ದೇಹ. ತುಂಬಿದ ನಿತಂಬ. ಉಟ್ಟಿದ್ದ ಚುಕ್ಕಿ ಬಿಳಿಯ ಸೀರೆ ಹೆಣ್ಣಿಗೆ ಅಪೂರ್ವ ಶೋಭೆಯನ್ನಿತ್ತಿತ್ತು. ನಡೆಯಲ್ಲಿನ ಬಳುಕು—ಲಯಬದ್ಧವಾಗಿ ತೂಗುತ್ತಿದ್ದ ನಿತಂಬಗಳು ನನ್ನ ಹೃದಯದಲ್ಲಿ ಒಂದು ದಳ್ಳುರಿಯನ್ನು ಎಬ್ಬಿಸಿದ್ದವು. ಹೆಣ್ಣು ದಾರಿಯುದ್ದಕ್ಕೂ ವ್ಯಾಪಾರ ಮೊದಲುಮಾಡಿತು. ಒಂದು ಅಂಗಡಿಯ ಮುಂದೆ ನಿಂತು, ಕಿತ್ತಲೆಹಣ್ಣನ್ನು ಕೊಂಡಿತು. ನಾನೂ ಸ್ವಲ್ಪ ದೂರದಲ್ಲಿ ನಿಂತೆ. ಅದು ವ್ಯಾಪಾರ ಮುಗಿಸಿ ಹೊರಡಲು ನಾನೂ ಹೊರಟೆ. ಮತ್ತೆ ಇನ್ನೊಂದು ಅಂಗಡಿಯ ಮುಂದೆ ನಿಂತಿತು. ಮಾರವಾಡಿ ಅಂಗಡಿ. ಎಲ್ಲಿ ಏನು ವ್ಯಾಪಾರವೋ ತಿಳಿಯಲಿಲ್ಲ.

ಸ್ವಲ್ಪ ಹೊತ್ತೇ ಹಿಡಿಯಿತು. ನಾನು ನಿಂತೆ. ಅಲ್ಲಿ ಇಲ್ಲಿ ಓಡಿಯಾಡಿದೆ—ಸಿಗರೇಟ್ ಕೊಂಡೆ, ಅದನ್ನು ಮುಗಿಸಿದೆ. ಹೆಣ್ಣು ಮಾರವಾಡಿ ಅಂಗಡಿ ಬಿಡಲಿಲ್ಲ. ಅದನ್ನು ಕಾಯುತ್ತ ನಿಂತೇ ಇದ್ದೆ. ನನಗಾಗಿದ್ದ ವ್ಯಥೆ ಸಾಲದೆಂದು ಗುರುತು ಪರಿಚಯದವರ ಕಾಟ ಬೇರೆ! ನನ್ನ ಪಾಡಿಗೆ ನಾನು ನಿಂತಿದ್ದರೆ 'ಇದೇನು ದೀಕ್ಷಿತ್, ಇಲ್ಲಿ ನಿಂತಿದ್ದೀರಿ' ಎಂದು ಕೇಳುವವರ ಕಾಟ. ಒಬ್ಬೊಬ್ಬರಿಗೆ ಒಂದೊಂದು ಸುಳ್ಳು ಹೇಳಿ ಪಾರಾದೆ. ಕೊನೆಗೆ ಮಾರವಾಡಿ ಅಂಗಡಿ ಕೆಲಸ ಮುಗಿಯಿತೆಂದು ಕಾಣುತ್ತದೆ—ಹೆಣ್ಣು ಹೊರಟಿತು. ಹತ್ತು ಹೆಜ್ಜೆ ಮುಂದೆ ಹೋಗಲಿಲ್ಲ. ಅದರ ಪರಿಚಯದವರು ಯಾರೋ ಸಿಕ್ಕಿದರು. ಅವರ ಜತೆ ಮಾತನಾಡುತ್ತ ನಿಂತಿತು. ನಾನೂ ಹಿಂದೆ ಸ್ವಲ್ಪ ದೂರದಲ್ಲಿ ನಿಂತೆ. ಇದಕ್ಕಿಂತ ಇನ್ನು ಕಣ್ಣುಮುಚ್ಚಾಲೆ ಬೇಕೇ? ಇಷ್ಟು ಆಗುವ ಹೊತ್ತಿಗೆ ಒಂದು ಗಂಟೆ ಹೊಡೆಯುವ ಸಮಯ ವಾಗಿತ್ತು. ಹೊಟ್ಟೆಯಲ್ಲಿ ತಳಮಳ—ಎದೆಯಲ್ಲಿ ಉರಿ. ತಲೆ ಸಿಡಿದು ಹೋಗುವ ಹಾಗೆ ಮೇಲೆ ಬಿಸಿಲು—'

'ಕಷ್ಟ—ಬಹಳ ಕಷ್ಟ....ಮುಂದೆ.'

'ಇಷ್ಟು ಅಡಚಣೆ ಬಂದರೂ ಮನಸ್ಸು ಕದಲಲಿಲ್ಲ. 'ಹಾಳಾಗಿ ಹೋಗಲಿ, ಮನೆಗೆ ಹೋಗುವ' ಎಂದೆನಿಸಲಿಲ್ಲ. ಏನು ಏನೋ ಕನಸು ಗಳು........ಅವಳನ್ನು ಮಾತನಾಡಿಸುವುದು—ಅವಳು ಒಪ್ಪೇ ಒಪ್ಪುತ್ತಾಳೆ—ಜತೆಯಲ್ಲಿಯೇ ಹೋಗುವುದು—ಸಂಜೆ ಅವಳನ್ನು ಕರೆದುಕೊಂಡು ಯಾವ ದಾದರೂ ಸಿನಿಮಾಗೆ ಹೋಗಿ ರಾತ್ರಿ........ಬೇಕೆನಿಸಿದರೆ ಮನೆಗೆ ಹಿಂದಿರುಗು ವುದು ಎಂದು ಲೆಕ್ಕ ಹಾಕಿಕೊಂಡೆ.'

'ಮಾತನಾಡಿಸಿದೆಯಾ?'

'ಕೇಳಿ—ಹೆಣ್ಣು ಮತ್ತೆ ಹೊರಟಿತು. ಎರಡು ಮೂರು ಸಲ ಹತ್ತಿರ ಹೋಗಬೇಕೆಂದು ಯತ್ನಿಸಿದೆ. ಹಾಳಾದವರು ಯಾರಾದರೂ ಬೀದಿಯಲ್ಲಿ ಕಾಣಿಸಿಕೊಳ್ಳುತ್ತಿದ್ದರು.'

'ಕಾಣಿಸಿಕೊಂಡರೇನು? ಮಾತನಾಡಿಸುವುದಕ್ಕೆ ಏನು ಭಯ?'

'ಒಳ್ಳೆಯ ಮಾತು ಹೇಳಿದೆ. ಒಂದುವೇಳೆ ಹೆಣ್ಣು ಕುಲೀನೆಯಾಗಿ ದ್ದರೆ........ಅವಳು ರಂಪ ಎಬ್ಬಿಸಿ ನನ್ನ ಫಜೀತಿ ಮಾಡಿದರೆ?'

‘ ಹಾಗಾದರೆ........’

‘ ಇನ್ನೊಂದು ದುಃಖ ನನ್ನನ್ನು ಕೊರೆಯುತ್ತಿತ್ತು. ಹೆಣ್ಣು ಒಮ್ಮೆಯೂ ನನ್ನ ಕಡೆ ದೃಷ್ಟಿ ಬೀರಿರಲಿಲ್ಲ. ನಾನು ಹಿಂಬಾಲಿಸುತ್ತಿರುವುದು ಅವಳ ಗಮನಕ್ಕೇ ಬಂದಿರಲಿಲ್ಲ. ಅವಳ ಮುಖದರ್ಶನವಾಗಲಿಲ್ಲವಲ್ಲಾ ಎಂಬ ಕೊರಗು ಬೇರೆ ಕಾಡುತ್ತಿತ್ತು. ಹೆಣ್ಣು ರಭಸವಾಗಿ ನಡೆಯಿತು. ದೊಡ್ಡ ದಾರಿಯನ್ನು ಬಿಟ್ಟು ಸಂದಿಯ ಕಡೆ ತಿರುಗಿತು. ಅವಳನ್ನು ನಾನು ಹಿಂಬಾಲಿಸುತ್ತಿದ್ದೇನೆಂದು ನೋಡಿದವರಿಗೆ ಗೊತ್ತಾಗದ ಹಾಗೆ ನಾನು ಹೋಗುತ್ತಿದ್ದೆ. ಒಂದು ಸಂದಿಯಿಂದ ಇನ್ನೊಂದು—ಅದರಿಂದ ಒಂದು ಒಳಸಂದಿ—ಅವಳ ಜಾಡು ಹಿಡಿಯುವುದು ಸಾಹಸದ ಕೆಲಸವಾಯಿತು. ಕೊನೆಗೆ........’

‘ ಕೊನೆಗೆ........’

‘ ನಿರ್ಜನವಾಗಿದ್ದ ಒಂದು ಸಂದಿಯಲ್ಲಿ ಹೊರಳಿತು. ನಾನು ಹೆಜ್ಜೆ ಹೆಚ್ಚಿಸಿ ಅದರ ಸಮೀಪಕ್ಕೆ ಹೋದೆ. ಅದರ ಹೆಜ್ಜೆ ನಾಲ್ಕು ಅಡಿ ಮುಂದಿತ್ತು. ಜತೆಯಲ್ಲಿ ನಡೆದೆ—ಒಮ್ಮೆ ಕಣ್ಣು ಹೊರಳಿಸಿ ಮುಖ ತಿರುಗಿಸಿತು. ನಾನು ಸುಸ್ತಾಗಿ ನಿಂತುಬಿಟ್ಟೆ........’

‘ ಏಕೆ ?’

‘ ಆ ಚಲುವೆಯ ರೂಪು ನೋಡಿ.’

‘ ಕುಲೀನೆಯೆಂದು ಹೆದರಿದೆಯಾ—ಮಾತನಾಡಿಸಲಿಲ್ಲವೇ ?’

‘ ಮಾತನಾಡಿಸಿಯೂ ಸುಖವಿಲ್ಲವೆಂದು. ಅದರ ಮುಖದ ತುಂಬ ಸಿಡುಬಿನ ಕಲೆಗಳು—ಎರಡು ಕಣ್ಣುಗುಡ್ಡೆಗಳಿಗೂ ಭ್ರೂಮಧ್ಯೆಯೇ ಸಂಧಿ ಸ್ಥಳ—ಮೂಗು ಒಂದು ಟೊಮಾಟೊ ಹಣ್ಣಿನ ಹಾಗಿತ್ತು—ನನ್ನ ಉತ್ಸಾಹ, ಸಾಹಸ, ಶ್ರಮ ಎಲ್ಲಾ ನೀರಿನಲ್ಲಿ ಹೋಮ ಮಾಡಿದ ಹಾಗಾಯಿತು.’

‘ ಎಂತಹ ಆಶಾಭಂಗ !

‘ ಆಶಾಭಂಗವಲ್ಲ—ಕಳ್ಳ ವಿಧಿ ನಮ್ಮ ಜತೆ ಆಡುವ ಕಣ್ಣುಮುಚ್ಚಾಲೆ ಇದು.’

ಎಂದ. ಅವನ ಕಥೆ ಕೇಳಿ ನಾವು ಮೂಕರಾದೆವು. ಯಾರೂ ಅವನನ್ನು ಹಳಿಯ ಹೋಗಲಿಲ್ಲ. ಪರಸ್ತ್ರೀಯರ ಹಿಂದೆಬೀಳುವ ಚಾಳಿ

ಯನ್ನು ಮೆಚ್ಚಿ ನಾವು ಸುಮ್ಮನೆ ಕೂಡಲಿಲ್ಲ. ಆದರೆ ಈ ರುದ್ರ ಗಭೀರ ಕಥೆಯಲ್ಲಿಯೂ ಒಂದು ನಗೆಯ ಬೆಳದಿಂಗಳ ಬೆಳಕಿತ್ತು.

ಗಂಟೆ ಒಂದು ಹೊಡೆಯಿತು. ಎಲ್ಲರೂ ಎದ್ದೆವು. ದೀಕ್ಷಿತನೂ ಎದ್ದು ಉತ್ತರೀಯವನ್ನು ಹೆಗಲೇರಿಸಿದ. ನಾವು ಮನೆಗಳಿಗೆ ಹೊರಟೆವು. ಆದರೆ ಅವನು........?

# ಅ. ನ. ಕೃಷ್ಣರಾಯರ ಗ್ರಂಥಗಳು

---

**ಕಥೆ**

ಕಣ್ಣುಮುಚ್ಚಾಲೆ
ಪಾಪ-ಪುಣ್ಯ
ಕಾಮನ ಸೋಲು
ಜಾತಿಹೀನನ ಮನೆಯ ಜ್ಯೋತಿ
ಕಿಡಿ
ಮಿಂಚು

**ಕಾದಂಬರಿ**

ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
ಮಂಗಳಸೂತ್ರ
ಸಾಹಿತ್ಯರತ್ನ
ನಟ ಸಾರ್ವಭೌಮ

**ಜೀವನ ಚರಿತ್ರೆ**

ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳು ಸಿದ್ಧೇಶ್ವರ ಕಾವ್ಯ

**ಪ್ರಬಂಧ**

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ರಾಜಾ ರವಿವರ್ಮ
ಸಾಹಿತ್ಯ ಮತ್ತು ಜೀವನ

**ನಾಟಕ**

ಮದುವೆಯೋ - ಮನೆ ಹಾಳೋ
ಆಹುತಿ
ಆದದ್ದೇನು
ಗೋಮುಖ ವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ

**ಸಂಕಲನ**

ಪ್ರಣಯ ಗೀತಗಳು
ರಸಋಷಿ
ಕಾಮನ ಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ಮ್ಯಾಕ್ಸಿಂ ಗಾರ್ಕಿ

**ಇತರ**

ನನ್ನನ್ನು ನಾನೇ ಕಂಡೆ

**ಅಚ್ಚಿನಲ್ಲಿ**

ಕರುಳಿನ ಕೂಗು (ಕಾದಂಬರಿ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
ಭಗವದ್ಗೀತಾರ್ಥಸಾರ (ಸಂಪಾದಿತ)

——::——

# ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

## ನಮ್ಮ ಪ್ರಕಟನೆಗಳು

| | | | | |
|---|---|---|---|---|
| ಮ್ಯಾಕ್ಸಿಂ ಗಾರ್ಕಿ | ಸಂ:—ಅ. ನ. ಕೃಷ್ಣರಾಯ | ೩ | ೮ | ೦ |
| ತಲೆಹರಟೆ | ನಾಡಿಗೇರ ಕೃಷ್ಣರಾಯ | ೧ | ೪ | ೦ |
| ಬಸವಣ್ಣನವರ ಅಮೃತವಾಣಿ | ಅ. ನ. ಕೃಷ್ಣರಾಯ | ೨ | ೪ | ೦ |
| ಪಾಪ–ಪುಣ್ಯ | ,, | ೧ | ೪ | ೦ |
| ಪ್ರಗತಿಶೀಲ ಸಾಹಿತ್ಯ | ಸಂ:— ,, | ೨ | ೦ | ೦ |
| ನನ್ನನ್ನು ನಾನೇ ಕಂಡೆ | ,, | ೧ | ೦ | ೦ |
| ಸಾಹಿತ್ಯ ಮತ್ತು ಜೀವನ | ,, | ೧ | ೮ | ೦ |
| ಎರಡು ನಾಟಕಗಳು | ,, | ೦ | ೧೨ | ೦ |
| ಸಂಧ್ಯಾರಾಗ | ,,(ತೃತೀಯ ಮುದ್ರಣ) | ೨ | ೦ | ೦ |
| ಅಶಾಂತಿಪರ್ವ | ಆನಂದಕಂದ (ದ್ವಿತೀಯ ಮುದ್ರಣ) | ೨ | ೪ | ೦ |
| ಲೀಲಾವತಿ ಪ್ರಬಂಧ | ಪ್ರೊ. ಕೆ. ಜಿ. ಕುಂದಣಗಾರ | ೦ | ೧೨ | ೦ |
| ನನ್ನ ನಲ್ಲ | ಮಧುರ ಚೆನ್ನ | ೦ | ೧೦ | ೦ |
| ಕರ್ನಾಟಕ ಗತವೈಭವ | ಆಲೂರ ವೆಂಕಟರಾಯರು | ೧ | ೧೨ | ೦ |
| ಕರ್ನಾಟಕ ವೀರರತ್ನಗಳು | ,, | ೧ | ೮ | ೦ |
| ತಮಿಳು ಕಥೆಗಳು | ಸಿದ್ದವನಹಳ್ಳಿ ಕೃಷ್ಣಶರ್ಮ | ೧ | ೦ | ೦ |
| ಆಸಾಮಿ ಕಥೆಗಳು | ,, | ೦ | ೧೨ | ೦ |
| ತೆಲುಗು ಕಥೆಗಳು | ,, | ೦ | ೧೨ | ೦ |
| ಕಾಮನಬಿಲ್ಲು ಭಾಗ ೨ | ಸಂ:—ಅ. ನ. ಕೃಷ್ಣರಾಯ | ೨ | ೪ | ೦ |
| ಕಣ್ಣುಮುಚ್ಚಾಲೆ | ,, | ೧ | ೪ | ೦ |
| ಜೀವನ ಸಂಗ್ರಾಮ | ಅರ್ಚಿಕ ವೆಂಕಟೇಶ | ೧ | ೦ | ೦ |
| ರಸಋಷಿ | ಸಂ:— ಅ. ನ. ಕೃಷ್ಣರಾಯ | ೧ | ೮ | ೦ |

